ಸೊಗಸಿನ ಕತೆ ( ೩ )

# ನೇಕಾರ ಮಾನಪ್ಪ


ಲೇಖಕರು :

**ಸಾನೇ ಗುರೂಜಿ**





ಅನುವಾದಕರು

**ಭಾಸ್ಕರ ಗೋಖಲೆ**







೧೯೫೧ ೧ ರೂಪಾಯಿ

# ಅನುವಾದಕನ ಮಾತು

ಸೊಗಸಿನ ಕತೆಗಳ ಮೊದಲನೆಯ ಭಾಗದ ಎರಡು ಆವೃತ್ತಿಗಳಾದವು. ಎರಡನೆಯ ಭಾಗದ ಒಂದು ಆವೃತ್ತಿ ಈಗ ತೀರುತ್ತ ಬಂದಿದೆ. ಕನ್ನಡಿಗರು ಸೊಗಸಿನ ಕತೆಗಳಿಗಿತ್ತ ಸ್ವಾಗತವು ಉತ್ತೇಜನಕರವಿದೆ ಇದು ಮೂರನೆ ಭಾಗವು. ಇದನ್ನು ಕನ್ನಡಿಗರು ಸ್ವಾಗತಿಸುವರರಲ್ಲಿ ಸಂದೇಹವಿಲ್ಲ.

ಸಾನೇ ಗುರೂಜಿಯವರು ಈಗ ನಮ್ಮ ಮಧ್ಯದಲ್ಲಿಲ್ಲ. ಭಾರತದ ಬೇರೆ ಬೇರೆ ವಿಭಾಗಗಳಲ್ಲಿರುವ ಉತ್ತಮ ವಾಙ್ಮಯವು ಎಲ್ಲ ಭಾಷೆಗಳಲ್ಲಿ ಬರ-ಬೇಕೆಂಬ ಹಂಬಲ ಅವರದು. ಭಾರತದ ವಿಭಾಗಗಳಲ್ಲಿ ಐಕ್ಯದ ತಿಳುವಳಿಕೆ ಉಂಟಾಗಬೇಕೆಂದು ಅವರು ಕೊನೆಯುವರೆಗೆ ಹೋರಾಡಿದರು. ಭಾರತದ ಒಂದು ಭಾಗದ ಪರಿಚಯು ಇನ್ನೊಂದಕ್ಕಿಲ್ಲ. ಆದ್ದರಿಂದ ನಮಗೆ ಅಸೂಯೆ, ದ್ವೇಷ ಕಂಡುಬರುತ್ತವೆ. ಪ್ರತಿಯೊಂದು ವಿಭಾಗವು ಉತ್ತಮವಾದ ಸಾಹಿತ್ಯವನ್ನು ನಿರ್ಮಿಸಿದೆ ಉತ್ತಮವಾದ ಕಲೆಗಳಲ್ಲಿ ಪ್ರಗತಿ ಹೊಂದಿವೆ ಎಂಬ ಮಾತಿನ ಅರಿವನ್ನು ನಾವು ಮಾಡಿಕೊಂಡರೆ ಭಾರತದ ಐಕ್ಯ ಸಾಧಿಸಿ ಭಾರತವು ಜಗತ್ತಿಗೆ ಒಂದು ಮೇಲ್ಪಂಕ್ತಿ ಹಾಕಿಕೊಡುವವು. ಇದಕ್ಕಾಗಿ ಅವರು "ಅಂತರ ಭಾರತಿ" ಎಂಬ ಸಂಸ್ಥೆ ಸ್ಥಾಪಿಸಿದ್ದಾರೆ. ಅದನ್ನು ಮುಂದುವರಿಸುವ ಕೆಲಸ ತರುಣರದು.

ಇರಲಿ. ಈ ಸೊಗಸಿನ ಕತೆಗಳ ಇನ್ನೂ ಏಳು ಭಾಗಗಳಿವೆ ಅವು ಕ್ರಮೇಣ ಪ್ರಸಿದ್ಧವಾಗುವವು ಕನ್ನಡ ಕಂದರಿಗೆ ಇವು ಮಾರ್ಗದರ್ಶಕವಾಗಲಿ ಎಂದು ಹಾರೈಸಿ, ಕನ್ನಡಿಗರ ಉದಾರ ಸ್ವಾಗತಕ್ಕಾಗಿ ಅವರಿಗೆ ನನ್ನ ಹಾರ್ದಿಕ ಧನ್ಯವಾದಗಳನ್ನು ಅರ್ಪಿಸುತ್ತೇನೆ

ಈ ಕೆಲಸದಲ್ಲಿ ನನಗೆ ನೆರವಾದ ಶ್ರೀ ಪುಸಾಳಕರ ವಕೀಲ ಅವಳ-ನೇರ ಶ್ರೀ ಚುಳಕಿ. ಗೋವಿಂದರಾಯರು ಮತ್ತು ಮೋಹನ ಮುದ್ರಣಾಲಯುದ ಒಡೆಯುರು ಇವರೆಲ್ಲರಿಗೆ ನನ್ನ ವಂದನೆಗಳು.

---

ಮುದ್ರಕರು :
ಎಸ್. ಎಲ್. ಜೋಶಿ,
ಮೋಹನ ಮುದ್ರಣಾಲಯು, ಧಾರವಾಡ

ಪ್ರಕಾಶಕರು :
ಭಾಸ್ಕರ ಗೋವಿಂದ ಗೋಖಲೆ
ವಕೀಲ, ಧಾರವಾಡ.

# ಎರಡು ಮಾತು

ಜಾರ್ಜ ಇಲಿಯಟ್ ಎಂಬ ಹೆಸರನ್ನಿಟ್ಟುಕೊಂಡು ಮೇರಿ ಆನ ಈವ್ಹಾನ್ಸ ಎಂಬ ಆಂಗ್ಲ ಬರೆಹಗಾರ್ತಿಯು ಅಮರ ಕಾದಂಬರಿಗಳನ್ನು ಬರೆದಿದ್ದಾಳೆ. ಅವಳ ಮೂಲ ಹೆಸರು ಲುಪ್ತವಾಗಿ ಈಗ ಅವಳು ಜಾರ್ಜ ಇಲಿಯಟ್ ಎಂಬ ಹೆಸರಿನಿಂದಲೇ ಹೆಸರಾಗಿದ್ದಾಳೆ. "ಸಿಲಾಸ ಮಾರ್ನರ" ಎಂಬ ಅಪ್ರತಿಮ ಕಾದಂಬರಿಯನ್ನು ೧೮೬೧ ರಲ್ಲಿ ಅವಳು ಬರೆದಳು. ಈ ಕಾದಂಬರಿಯೊಳಗಿನ ಕಥೆಯನ್ನು "ಮನೂಬಾಬಾ" ಈ ಹೆಸರಿನ ಕಥೆಯಲ್ಲಿ ಸಂಕ್ಷೇಪದಿಂದ ಕೊಡುತ್ತಿದ್ದೇನೆ ಸೆರೆಮನೆಯಲ್ಲಿದ್ದಾಗ ಕೆಲಸ ಮಾಡುವಾಗ ಅಥವಾ ಕೆಲಸ ಮುಗಿದಮೇಲೆ ನನ್ನೊಡನೆ ಇರುವ ಸತ್ಯಾಗ್ರಹಿಗಳಿಗೆ ನಾನು ಪಾಶ್ಚಾತ್ಯ ಗ್ರಂಥಗಳಲ್ಲಿ ಸುಂದರ ಕತೆಗಳನ್ನು ಹೇಳುತ್ತಿದ್ದೆ. ಅವರು ನನಗೆ "ನೀವು ನಮಗೆ ಹೇಳುವ ರೀತಿಯಲ್ಲಿಯೇ ಈ ಕತೆಗಳನ್ನು ಬರೆದು ಪ್ರಸಿದ್ಧಿಸಿರಿ. ಅಂದರೆ ನಾವೂ ಹೊರಗೆ ಹೋದ ಮೇಲೆ ಅವನ್ನು ಓದಿ ಹುಡುಗರಿಗೆ ಹೇಳುವೆವು" ಎಂದು ಅನ್ನು-ತ್ತಿದ್ದರು. ಹೊತ್ತು ಸಿಕ್ಕಾಗ ಅವನ್ನು ಬರೆಯಬೇಕೆಂದು ಮಾಡಿಕೊಂಡಿದ್ದೆ. ಅದರಂತೆ ಈಗ ಈ ಕತೆ ಬರೆದಿದ್ದೇನೆ

ಸಿಲಾಸ ಮಾರ್ನರ ಈ ಕಾದಂಬರಿಯಲ್ಲಿ ವ್ಯಕ್ತಿಯ ವಿಕಾಸವು ಹೇಗಾಗುತ್ತದೆಂಬ ಮಾತನ್ನು ಬಹಳ ಸುಂದರ ರೀತಿಯಲ್ಲಿ ತೋರಿಸಲಾಗಿದೆ ಮನುಷ್ಯನ ವಿಕಾಸವು ತನ್ನಾಚೆಗೆ ಹೋಗುವದರಲ್ಲಿದೆ. ಜೀವನದ ಉಪ-ಯೋಗವು ಧ್ಯೇಯಕ್ಕಾಗಿ ಆದಾಗ ಅದರ ವಿಕಾಸಕ್ಕೆ ಪ್ರಾರಂಭವಾಗುತ್ತದೆ. ಈ ಧ್ಯೇಯವು ಒಂದು ಅನಾಥ ಬಾಲಕನನ್ನು ಸಂರಕ್ಷಿಸಿ ಬೆಳೆಸುವದೂ ಇರಬಹುದು, ಅಥವಾ ದೇಶದ ಸ್ವಾತಂತ್ರ್ಯ ಗಳಿಸುವದೂ ಇರಬಹುದು. ಸ್ವಾರ್ಥ ತೊರೆದಾಗ, ಸಂಕುಚಿತ ದೃಷ್ಟಿಯು ಅಳಿದಾಗ ಜೀವನಕ್ಕೆ ಅರ್ಥವು ಬರುವದು ಸಮುದ್ರಕ್ಕೆ ಕೂಡುವದರಲ್ಲಿದೆ ನದಿಯ ಸಾರ್ಥಕತೆ, ಮಾನವ್ಯದ ಪೂಜೆಯಲ್ಲಿದೆ ಜೀವನದ ಪೂರ್ಣತೆ.

ಧ್ಯೇಯಹೀನ ಜೀವನವು ನೀರಸವೂ, ಯಂತ್ರಮಯವೂ, ಜಡವೂ, ಬೇಸರಿಕೆ ಬರುವಂತಹದೂ ಇರುತ್ತದೆ; ಮತ್ತು ಧ್ಯೇಯವುಳ್ಳ ಜೀವನವು ರಸ-ಮಯ, ಪ್ರೇಮಮಯ, ತ್ಯಾಗಮಯ ಮತ್ತು ಚೈತನ್ಯಮಯವಾಗುತ್ತದೆಂಬ ಮಾತನ್ನು ಈ ಕಾದಂಬರಿಯಲ್ಲಿ ಉತ್ಕೃಷ್ಟವಾಗಿ ಚಿತ್ರಿಸಲಾಗಿದೆ.

ನಾನು ಬರೆದ ಕತೆಯಲ್ಲಿ ಏನಾದರೂ ಸ್ವಾರಸ್ಯವು ವಾಚಕರಿಗೆ ಅನಿಸಿದರೆ ಅವೆಲ್ಲ ಮೂಲ ಲೇಖಿಕೆಗೆ ಸಲ್ಲತಕ್ಕದ್ದು. ನೀರಸತೆ ಇದ್ದರೆ ನನ್ನದು. ನಾನು ಕತೆ ಹೇಳುವಾಗ ವಿಶೇಷ ಬದಲಾವಣೆಗಳನ್ನು ಮಾಡಿಲ್ಲ. ನಮ್ಮ ದೇಶದ ವಾತಾವರಣಕ್ಕೆ ಕೂಡಿಹೋಗುವ ರೀತಿಯಲ್ಲಿ ಕತೆಯನ್ನು ಹೇಳಿದ್ದೇನೆ. ಎಲ್ಲರ ಮನಸಿಗೂ ಬರಲಿ.

೬–೧–೪೦ — ಸಾನೆ ಗುರೂಜಿ.

---

# ಪ ರಿ ವಿ ಡಿ

# ನೇಕಾರ ಮಾನಪ್ಪ

## ಪ್ರಕರಣ ೧

### ತಾಯ್ನಾಡಿನ ತ್ಯಾಗ

ಬಹುಲಾ ನದಿಯ ತೀರದ ಮೇಲೆ ಸಾಯಗಾವ ಎಂಬ ಊರು ಇತ್ತು. ಅದೊಂದು ಸುಖದಿಂದ, ಸಮೃದ್ಧಿಯಿಂದ ಬಾಳುವ ಊರಾಗಿತ್ತು. ಆ ಊರಲ್ಲಿ ಬೇರೆ ಬೇರೆ ತರದ ಉದ್ಯೋಗಸ್ಥರಿದ್ದರು. ಒಕ್ಕಲಿಗರು, ನೇಕಾರರು, ಬಣಗಾರರು, ಪಿಂಜಾರರು, ಅಕ್ಕಸಾಲಿಗರು, ಬಡಿಗೇರರು, ಕಮ್ಮಾರರು, ಕುಂಬಾರರು, ಮೊದಲಾದ ಎಲ್ಲ ಕೆಲಸ ಮಾಡುವವರು ಅಲ್ಲಿದ್ದರು. ಊರಲ್ಲಿ ವಿಶೇಷವಾಗಿ ಯಾವ ತರದ ಜಗಳಾಟ; ಬಡಿದಾಟಗಳಿರಲಿಲ್ಲ. ಯಾರೂ ಯಾರ ವಿಷಯಕ್ಕೆ ಅಸೂಯೆ ಪಡುತ್ತಿದ್ದಿಲ್ಲ. ಎಲ್ಲರೂ ಪ್ರೇಮದಿಂದ ಬಾಳುತ್ತಿದ್ದರು.

ಸಾಯಗಾವಿನಲ್ಲಿ ಒಂದು ವಿಶೇಷ ಪರಂಪರೆ ಇತ್ತು. ರಾಜನಲ್ಲಿ ನ್ಯಾಯ ಕೇಳಲು ಯಾರೂ ಹೋಗುತ್ತಿದ್ದಿಲ್ಲ. ಪಾಪ ಮಾಡುವವರಿಗೆ ದೇವರೇ ಶಿಕ್ಷೆ ಕೊಡುವನೆಂದು ಅವರ ನಂಬುಗೆ. ಪಾಪ ಮಾಡಿದವನ ಮನಸ್ಸೇ ಅವನನ್ನು ಕಟಿಯುತ್ತದೆ, ಬೇರೆ ಶಿಕ್ಷೆ ಯಾಕೆಂದು ಕೆಲವರು ಅನ್ನುತ್ತಿದ್ದರು. ಊರಲ್ಲಿ ಯಾವದಾದರೊಂದು ಅಪರಾಧವಾದರೆ ಎಲ್ಲ ಜನರು ಊರ ಗುಡಿಯಲ್ಲಿ ಕೂಡುತ್ತಿದ್ದರು. ಅಪರಾಧಿಯ ವಿಚಾರಣೆ ಅಲ್ಲಿ ಆಗುವದು. ಅವನ ಹೆಸರು ದೇವರಿಗೆ ಹೇಳಲಾಗುತ್ತಿತ್ತು. ಬೇರೆ ಶಿಕ್ಷೆ ಇದ್ದಿಲ್ಲ. ಊರಲ್ಲಿಯ ದೊಡ್ಡವರಿಗೆ, ಚಿಕ್ಕವರಿಗೆ ಎಲ್ಲರಿಗೂ ಅವನ ಹೆಸರು ತಿಳಿಯುತ್ತಿತ್ತು. ಎಲ್ಲರೂ ಅವನತ್ತ 'ಇವನೇ ಅಪರಾಧಿ' ಎಂಬ ದೃಷ್ಟಿಯಿಂದ ನೋಡುವರು. ಇದೇ ಶಿಕ್ಷೆ ಅಪರಾಧಿಗೆ.

ಸಾಯಗಾವದಲ್ಲಿ ರಾಮಪ್ಪ ಮತ್ತು ಮಾನಪ್ಪ ಎಂಬ ಇಬ್ಬರು ಗೆಳೆಯರು. ಒಬ್ಬನನ್ನು ಬಿಟ್ಟು ಇನ್ನೊಬ್ಬನು ಇರುತ್ತಿದ್ದಿಲ್ಲ. ಮಾನಪ್ಪ

ಒಬ್ಬಂಟಿಗ. ಅವನ ತಾಯಿ ತಂದೆ ತೀರಿಕೊಂಡಿದ್ದರು. ಅವನಿಗೊಬ್ಬ ತಂಗಿ ಇದ್ದಳು. ಅವಳ ಮೇಲೆ ಇವನ ಜೀವ ಬಹಳ. ಆದರೆ ಅವಳೂ ತೀರಿಕೊಂಡಳು. ಮಾನಪ್ಪನಿಗೆ ಬಹಳ ದುಃಖವಾಯಿತು. ಜೀವನದಲ್ಲಿ ಅರ್ಥವೆನಿಸದಂತಾಯಿತು. ಯಾರಿಗಾಗಿ ಉಳಿಯಬೇಕು, ಯಾಕೆ ಉಳಿಯ ಬೇಕು ತಿಳಿಯದಂತಾಯಿತು. ಆದರೆ ರಾಮಪ್ಪ ಇರುವದರಿಂದ ಅವನಿಗೆ ಹುಚ್ಚು ಹಿಡಿಯಲಿಲ್ಲ.

ಮಾನಪ್ಪ ನೇಕಾರನಿದ್ದ. ನೇಕಾರಿಕೆ ಅವನ ಬೆರಳುಗಳಲ್ಲಿತ್ತು. ತಂಗಿ ಇದ್ದಾಗ ಅವಳಿಗಾಗಿ ನೇಯುತ್ತಿದ್ದ. ದುಡ್ಡು ಗಳಿಸಿ ತಂಗಿಯ ಶೃಂಗಾರ ಮಾಡುತ್ತಿದ್ದ. ಅವಳ ಮದುವೆಗೆಂದು ಹಣ ಕೂಡಿಸಿ ಇಡುತ್ತಿದ್ದ. ತಂಗಿ ಸತ್ತ ಮೇಲೆ ಮಾನಪ್ಪ ಕೆಲಸ ಕಡಿಮೆ ಮಾಡಿದನು. ದೇವರು ಅವನ ಜೀವನ-ವಸ್ತ್ರವನ್ನು ದುಃಖದಿಂದ ನೇಯ್ದಿದ್ದನಂತೆ ತೋರುತ್ತದೆ. ಆ ದುಃಖದ ವಸ್ತ್ರವನ್ನು ಹೊತ್ತುಕೊಂಡು ಮಾನಪ್ಪನು ಒಂದು ಮೂಲೆಯಲ್ಲಿ ಕೂಡ್ರುವನು. ರಾಮಪ್ಪ ಬಂದಾಗ ಮಾತ್ರ ಸ್ವಲ್ಪ ನಗುಮುಖನಾಗುವನು.

ಹೀಗೆ ಕೆಲವು ದಿನಗಳು ಹೋದವು. ಒಮ್ಮೆ ಆ ಊರಿಗೆ ಒಬ್ಬ ಪರದೇಶದ ವ್ಯಾಪಾರಿ ಬಂದ. ಅವನಲ್ಲಿ ಹೇರಳವಾದ ಹಣವಿತ್ತು. ರಾಮಪ್ಪನಿಗೆ ದುಡ್ಡಿನ ಕೊರತೆ ಬಹಳ ಇತ್ತು. ಅವನ ಮನಸ್ಸಿನಲ್ಲಿ ಪಾಪವು ಮನೆಮಾಡಿಕೊಂಡಿತು. ಆ ಸಿರಿವಂತನ ಕೊಲೆ ಮಾಡಬೇಕೆಂದು ಅನಿಸಿತು. ಕೊನೆಗೆ ಸಂಧಿ ಸಾಧಿಸಿ ಅವನು ಆ ಪರದೇಶದ ಸಿರಿವಂತನನ್ನು ಕೊಂದನು. ಮತ್ತೆ ಅವನ ದುಡ್ಡು ಹೊತ್ತನು. ಆದರೆ ಈ ಕೊಲೆಯನ್ನು ಮುಚ್ಚಿಕೊಳ್ಳುವದು ಹೇಗೆ ?

ರಾಮಪ್ಪ ರಕ್ತದಿಂದ ತುಂಬಿದ ಚೂರಿಯನ್ನು ಮಾನಪ್ಪನ ತಲೆಗಿಂಬಿನ ಹತ್ತರ ಇಟ್ಟನು. ಮಾನಪ್ಪ ಮಲಗಿದ್ದ. ರಾಮಪ್ಪ ತನ್ನ ಮನೆಗೆ ಹೋಗಿ ಮಲಗಿದ. ಬೆಳಗಾಯಿತು. ಸಿರಿವಂತನ ಹೆಣ ಬಿದ್ದಿತ್ತು. ಊರಲೆಲ್ಲ ಸುದ್ದಿ ಹಬ್ಬಿತು ಯಾರು ಕೊಲೆ ಮಾಡಿದರು? ಯಾರು ಈ ಪಾಪ ಮಾಡಿದರು? ಎಂದು.

ಮಾನಪ್ಪ ಎದ್ದ. ರಕ್ತ ಮುಳುಗಿದ ಚೂರಿ ನೋಡಿ ಬೆಪ್ಪಾದನು. ಅದನ್ನು ಕೈಯಲ್ಲಿ ಹಿಡಿದು ಹುಚ್ಚನಂತೆ ಹೊರಬಿದ್ದನು ಜನ ಅವನನ್ನು

ನೋಡಹತ್ತಿತು. "ನೋಡಿರಿ ರಕ್ತ ಮುಣುಗಿದ ಈ ಚೂರಿ! ಯಾರ ರಕ್ತವಿದು? ಯಾರ ಚೂರಿ ಇದು? ನನ್ನ ತಲೆಗಿಂಬಿನ ಹತ್ತರ ಯಾರಿಟ್ಟರು? ಕೆಂಪಾದ ಈ ಚೂರಿ" ಹೀಗೆ ಮಾನಪ್ಪ ಬಡಬಡಿಸುತ್ತಿದ್ದ.

"ಇವನೇ ಆ ಪ್ರವಾಸಿಕನ ಕೊಲೆ ಮಾಡಿದವನು."

"ಮತ್ತೆ ಮೇಲೆ ಏನೂ ಗೊತ್ತಿಲ್ಲದವರಂತೆ ಸೋಗು ಹಾಕಿದ್ದಾನೆ?"

"ಕೊಲೆ ಮಾಡಿ ಅವನಿಗೆ ಏನು ಗಳಿಸುವದಿದೆ?"

"ದೇವರಿಗೆ ಗೊತ್ತು! ಇವ ಒಬ್ಬಂಟಿಗ, ಇವನಿಗೆ ಏಕೆ ಬೇಕು ದುಡ್ಡು?"

"ಲೋಭ ಯಾರನ್ನೂ ಬಿಟ್ಟಿಲ್ಲ."

ಜನ ಹೀಗೆ ಆಡುತ್ತಿತ್ತು ಮಾನಪ್ಪನಿಗೆ ಅರ್ಥವೆ ಆಗುತ್ತಿರಲಿಲ್ಲ ಅವನು ಹುಚ್ಚನಂತೆ ನೋಡುತ್ತಿದ್ದ.

"ನಾನೇಕೆ ಕೊಲೆ ಮಾಡಲಿ? ಮೊದಲೆ ದುಃಖದಿಂದ ಬೆಂದಿದ್ದೇನೆ. ನನಗೆ ಯಾವ ಆಶೆ ಆಕ್ಷಾಂಕ್ಷೆಗಳಿಲ್ಲ. ದುಡ್ಡಿನ ಆಶೆ ಇಲ್ಲ ಯಾರೋ ಈ ಚೂರಿ ತಂದು ನನ್ನ ತಲೆಗಿಂಬಿನ ಹತ್ತಿರ ಇಟ್ಟಿದ್ದಾರೆ. ತಾನು ಮಾಡಿದ ಪಾಪವನ್ನು ನನ್ನ ಮೇಲೆ ಹಾಕಿ ಹೋಗಿದ್ದಾರೆ" ಎಂದು ಮಾನಪ್ಪ ಅನ್ನುತ್ತಿದ್ದನು.

ಅವನ ಮಾತಿನತ್ತ ಯಾರ ಲಕ್ಷ್ಯವೂ ಇದ್ದಿಲ್ಲ. ಕೊನೆಗೆ ಎಲ್ಲರೂ ಗುಡಿಯಲ್ಲಿ ಕೂಡಿದರು. ಮಾನಪ್ಪನೂ ದುಃಖಿತನಾಗಿ ಅಲ್ಲಿ ಹೋದನು. ಇವನೇ ಆ ಕೊಲೆ ಮಾಡಿರಬೇಕೆಂದು ಎಲ್ಲರೂ ಅಭಿಪ್ರಾಯಪಟ್ಟರು. ಮಾನಪ್ಪನ ತಲೆ ಕೆಳಗಾಗಿತ್ತು. ದೇವರು ಅವನ ತಂದೆ ತಾಯಿಯರನ್ನು ಒಯ್ದಿದ್ದ; ಅವನ ತಂಗಿಯನ್ನೂ ಒಯ್ದಿದ್ದ. ಈಗ ಅವನ ಮಾನವನ್ನು ಹರಣ ಮಾಡಲು ಹೊಂಚು ಹಾಕಿದ್ದ. ಜೀವನದಲ್ಲಿರುವ ಅತಿ ಬೆಲೆಯುಳ್ಳ ವಸ್ತು ಇದು. ಅದೂ ಇಂದು ಹೊರಟಿತ್ತು. ಮಾನಪ್ಪ ರಾಮಪ್ಪನತ್ತ ನೋಡಿದ. ಆದರೆ ಅವನು ಇವನತ್ತ ನೋಡಲಿ ತನ್ನ ಜೀವದ ಗೆಳೆಯನಾದರೂ ತನಗೆ ಸಹಾನುಭೂತಿ ತೋರಿಸುವನೆಂಬ ಭಾವನೆ ಅವನಿಗೆ ಇತ್ತು. ಆದರೆ, ಆ ಆಶೆಯೂ ವಿಫಲವಾಗುವದೇ?

ಮಾನಪ್ಪ ಎದ್ದು ನಿಂತನು. ಅವನು ಅಂದ, "ಇಡೀ ಊರವರು ನಾನು ಅಪರಾಧಿಯೆಂದು ಅಂದರೂ ನಾನು ನಿರಪರಾಧಿ ಇದ್ದೇನೆ. ಇಲ್ಲ

ನೆರೆದ ಎಲ್ಲರಿಗೂ ನಾನು ಕೊಲೆಗಡಕನೆಂದು ಅನಿಸುತ್ತಿದೆಯೋ ? ನನ್ನ ಗೆಳೆಯ ರಾಮಪ್ಪನೂ ಹೀಗೆ ಅನ್ನಲಿಕ್ಕಿಲ್ಲ ಗೆಳೆಯನೇ ಗೆಳೆಯನನ್ನು ಬಲ್ಲನು. ನನ್ನ ಸ್ವಭಾವದ ಅರಿವು ರಾಮಪ್ಪನಿಗೆ ಇದೆ. ರಾಮಪ್ಪ, ನಿನ್ನ ಅಭಿಪ್ರಾಯವನ್ನು ಹೇಳು. ಊರಿನವರೆಲ್ಲರೂ ನನಗೆ ಅಪರಾಧಿ ಅಂದರೂ ಅಡ್ಡಿ ಇಲ್ಲ. ಆದರೆ ನನ್ನ ಗೆಳೆಯ ನನ್ನನ್ನು ಹಾಗೆ ಭಾವಿಸಬಾರದು. ರಾಮಪ್ಪ, ನಿನ್ನ ದೃಷ್ಟಿಯಲ್ಲಿಯೂ ನಾನು ಅಪರಾಧಿಯೇ ? ಹೇಳು, ಹೇಳು ಬೇಗ. ನಿನ್ನ ಅಭಿಪ್ರಾಯಕ್ಕೆ ನಾನು ಬೆಲೆ ಕೊಡುತ್ತೇನೆ. ನೀನು ಇದ್ದಿ ಯೆಂದೇ ನಾನು ಜೀವಂತನಿದ್ದೇನೆ. ಈ ಜೀವನದಲ್ಲಿ ನನ್ನದು ಎಂದು ಏನಾದರೂ ಇದ್ದರೆ ಅದು ನಿನ್ನೊಡನೆ ಇರುವ ಗೆಳೆತನ ನನ್ನ ಕಡೆ ನೋಡು, ಗೆಳೆಯ ! ಈ ಕೈಗಳು ಯಾರ ಹೃದಯದಲ್ಲಿ ಚೂರಿಯನ್ನು ಇರಿಯಬಲ್ಲವು! ಸುಂದರವಾದ ಅರಿವೆಗಳನ್ನು ನೇಯುವ ಈ ಕೈಗಳು, ಯಾರ ಜೀವನ-ವಸ್ತ್ರವನ್ನು ಹರಿಯಲೆಳಸುವವು? ಇದು ಸಾಧ್ಯವೇ? ಹೇಳು, ಗೆಳೆಯ, ಬೇಗ ಹೇಳು. ನಿನ್ನ ಮನಸ್ಸಿಗೆ ಯೋಗ್ಯ ಕಂಡದ್ದನ್ನೇ ಆಡು ”

ರಾಮಪ್ಪ ಎದ್ದು ನಿಂತನು ಅವನು ಅಂದ, “ ಮಾನಪ್ಪನು ನನ್ನ ಗೆಳೆಯ. ಆದರೆ ಸತ್ಯವು ಅವನಿಗಿಂತ ಶ್ರೇಷ್ಠವಾದದ್ದು. ಗೆಳೆಯ, ಅದನ್ನು ಎಂದಿಗೂ ಬಿಡಲಾರೆ ಮಾನಪ್ಪ, ಮನುಷ್ಯನ ಮನಸ್ಸಿನಲ್ಲಿ ಯಾವಾಗ ಏನು ಬರುವದು ಎಂಬುದನ್ನು ಹೇಳಲು ಬರುವಂತಿಲ್ಲ. ನಿರಭ್ರ ಆಕಾಶದಲ್ಲಿ ಯಾವಾಗ ಕಾರ್ಮೋಡಗಳು ಬರುವವು, ಇದನ್ನು ಯಾರು ಹೇಳಬಲ್ಲರು! ಈ ಚೂರಿ ನಿನ್ನ ತಲೆಗಿಂಬಿನ ಹತ್ತರ ಇತ್ತು ಅದನ್ನೇನು ಎರಡನೆಯವರು ತಂದಿಟ್ಟರೇ ? ನೀನೇ ಕೊಲೆ ಮಾಡಿರಬೇಕೆಂದು ನನಗೂ ಅನಿಸುತ್ತದೆ ನನ್ನ ಗೆಳೆಯ ಕೊಲೆ ಮಾಡಿರಬೇಕು ಎಂಬ ಮಾತಿನಿಂದ ನನಗೆ ಎಲ್ಲರಿಗಿಂತ ಹೆಚ್ಚು ವ್ಯಸನವಾಗಿದೆ. ಕೊಲೆಗಡಕನ ಸ್ನೇಹಿತ ಎಂದು ಜನರು ನನ್ನನ್ನು ಕರೆಯುವರು; ಹೀಯಾಳಿಸುವರು. ಮಾನಪ್ಪ, ಏನುಮಾಡಿದಿ? ಮಾಡಿ ಮತ್ತೆ ಮೇಲೆ ನಿರಪರಾಧಿ ಎಂದು ಅನಿಸಿಕೊಳ್ಳಬೇಕೆಂದು ನಟಿಸುತ್ತಿ. ಇದು ಬಹಳ ಕೆಟ್ಟ ಕೈಯಿಂದ ಪಾಪವಾಯಿತು. ದುಃಖದಿಂದ ಔದಾಸೀನ್ಯದಿಂದ ಅಥವಾ ಹುಚ್ಚಿನ ಭರದಲ್ಲಿ ಈ ಪಾಪವನ್ನು ಮಾಡಿರಬಹುದು. ಆದರೆ ಇದ್ದ

ಮಾತು ಒಪ್ಪಿ ಊರ ಜನರ ಕ್ಷಮೆ ಕೋರುವದನ್ನು ಬಿಟ್ಟು, ಡಂಭಾಚಾರ ನಡಿಸಿರುವೆಯಲ್ಲ ? ಇದಕ್ಕೇನೆನ್ನಬೇಕು ? ತನ್ನ ಗೆಳೆಯನ ಈ ಮಾತು ಕೇಳಿ ಮಾನಪ್ಪನ ಮುಖ ಕಪ್ಪಿಟ್ಟಿತು. ಎಲ್ಲಿ ಅವನ ಆಶೆ ಕೇಂದ್ರೀಕೃತವಾಗಿತ್ತೊ, ಅಲ್ಲಿಯೆ ಅವನಿಗೆ ಬರಿ ನಿರಾಶೆಯೇ ಸಿಕ್ಕಿತು. ನಾವು ಯಾರನ್ನು ಪ್ರೀತಿಸುತ್ತೇವೆಯೋ, ಅಂಥವರ ಮನಸಿನಲ್ಲಿ ನಮ್ಮ ವಿಷಯಕ್ಕೆ ವಿಕಲ್ಪ ಹುಟ್ಟುವಂಥ ದುಃಖ ಇನ್ನೊಂದಿಲ್ಲ ಅದರಂಥ ದೊಡ್ಡ ಪೆಟ್ಟು ಇನ್ನೊಂದಿಲ್ಲ.

ಸಭೆ ಮುಗಿಯಿತು. ಮಾನಪ್ಪನಿಗೆ "ಕೊಲೆಗಡಕ, ಕೊಲೆಗಡಕ" ಎಂದು ಎಲ್ಲರೂ ಸಂಬೋಧಿಸಿದರು. ಮಾನಪ್ಪ ಮನೆ ಬಿಟ್ಟು ಹೊರಬೀಳಲಿಲ್ಲ ಅವನ ಮನಸಿನ ಪರಿಸ್ಥಿತಿ ಭಯಂಕರವಾಗಿತ್ತು. ಒಂದು ರಾತ್ರಿ ಅವನು ಸಾಯುಗಾವವನ್ನು ಬಿಡುವದೆಂದು ನಿಶ್ಚಯಿಸಿದನು. ತೀವ್ರ ನಿರಾಶೆ ಅವನನ್ನು ಕವಿದಿತ್ತು. ಈ ಜಗತ್ತಿನಲ್ಲಿ ಎಲ್ಲಿಯೂ ನ್ಯಾಯ, ಪ್ರೇಮ, ಸತ್ಯ ಇಲ್ಲ ಎಂದುಕೊಂಡನು. ದೇವರೂ ಇಲ್ಲ, ಧರ್ಮವೂ ಇಲ್ಲ ಅಂದನು. ಮರಣ ಬರುವದಿಲ್ಲೆಂದು ಬದುಕುವದು ಜಗತ್ತು ಒಂದು ಭಯಾನಕ ವಸ್ತುವೆಂದು ಅವನಿಗೆ ಅನಿಸಿತು.

ಮಧ್ಯರಾತ್ರಿಯ ಸಮಯ ಕಗ್ಗತ್ತಲೆ ಕವಿದಿತ್ತು. ಮಾನಪ್ಪನ ಮನದಲ್ಲಿ ಹೊರಗಿನ ಕಗ್ಗತ್ತಲೆಯಗಿಂತ ಹೆಚ್ಚು ಕತ್ತಲೆ ಕವಿದಿತ್ತು. ಆದರೂ ಅವನು ಎದ್ದ. ತನ್ನ ಪೂರ್ವಜರ ಮನೆಯನ್ನು ಬಿಟ್ಟು ಹೊರಟನು. ಯಾವ ಮನೆಯಲ್ಲಿ ಅವನ ತಂದಿ ತಾಯಿ ಅವನನ್ನು ಸಲುಹಿದರು, ಎಲ್ಲಿ ಅವನು ತನ್ನ ತಂಗಿಯನ್ನು ಪ್ರೀತಿಯಿಂದ ಸಲುಹಿದನು, ಆ ಮನೆಯನ್ನು ಬಿಟ್ಟು ಅವನು ಹೊರಟನು. ಅವನಿಗೆ ಬಹಳ ವ್ಯಸನವಾಯಿತು; ಕಣ್ಣೀರು ಸುರಿಯುತ್ತಿತ್ತು. ಪ್ರಣಾಮ ಮಾಡಿ ಮನೆ ಹೊರಗೆ ಹೆಜ್ಜೆ ಇಟ್ಟನು. ಹಾದಿ ಹಿಡಿದು ಹೊರಟನು. ಬಹುಲಾ ನದಿಯ ದಂಡೆಯ ಮೇಲೆ ಬಂದನು. ಈ ನದಿಯಲ್ಲಿ ಆವನು ಎಷ್ಟಾವರ್ತಿ ಈಸಿದ್ದನು. ಗೆಳೆಯರೊಡನೆ ಆಟ ಮಾಡಿದ್ದನು! ನದಿಯಲ್ಲಿಯ ಒಂದು ಬಂಡೆಯ ಮೇಲೆ ಕುಳಿತನು. ಆಕಾಶದಲ್ಲಿ ತಾರೆಗಳು ಮಿನುಗುತ್ತಿದ್ದವು ಮನಸ್ಸಿನಲ್ಲಿ ನೂರಾರು ನೆನಪುಗಳು ಮೇಲಕ್ಕೇಳುತ್ತಿದ್ದವು. ಹೃದಯವು ಉಕ್ಕೇರಿ ಬರುತ್ತಿತ್ತು. ಬಹಳ ಕಷ್ಟ

ದಿಂದ ಎದ್ದನು. ಆ ಮಧ್ಯ ರಾತ್ರಿಯಲ್ಲಿ ಬಹುಲಾ ನದಿಯ ನೀರು ಕುಡಿವು ಊರಿಗೆ ನಮಸ್ಕಾರ ಮಾಡಿದ. ಮತ್ತು ವೇಗದಿಂದ ಹೊರಟನು. ದೂರ ದೂರ ಹೋಗಬೇಕೆಂದು ಮಾನಪ್ಪನು ಹೊರಟ. ಎಲ್ಲಿ ಯಾರೂ ತನ್ನನ್ನು ಕೊಲೆಗಡಕ ಎಂದು ಕರೆಯಲಿಕ್ಕಿಲ್ಲವೋ ಅಂಥಲ್ಲಿ ಹೋಗಬೇಕೆಂದು ಹೊರಟನು. ಮಾತೃಭೂಮಿಗೆ ನಮಸ್ಕಾರ ಮಾಡಿ ಮುಂದರಿದನು.

---

# ಪ್ರಕರಣ ೧

## ಒಬ್ಬಂಟಿಗ ಮಾನಪ್ಪ

ಮಾನಪ್ಪ ಈಗ ರಾಯಗಾವದಲ್ಲಿದ್ದ. ಈ ಊರಿಗೆ ಬಂದು ಈಗ ಹದಿನೈದು ವರ್ಷಗಳಾಗಿದ್ದವು. ಗೆಳೆಯರು ಯಾರೂ ಇದ್ದಿಲ್ಲ. ಊರ ಒಂದು ತುದಿಯಲ್ಲಿ ಅವನ ಸಣ್ಣ ಗುಡಿಸಲಿತ್ತು. ಅದೇ ಅವನ ಜಗತ್ತು. ಅಲ್ಲಿ ಒಂದು ಮಗ್ಗ ಇತ್ತು. ಇಡೀ ದಿವಸ ಮಾನಪ್ಪ ನೇಯುತ್ತಿದ್ದ. ಉತ್ತಮ ನೇಕಾರನೆಂದು ಹೆಸರಾಗಿದ್ದ. ದೊಡ್ಡವರ, ಸಿರಿವಂತರ ಹೆಣ್ಣು ಮಕ್ಕಳೆಲ್ಲ ಅವನಲ್ಲಿ ಬರುವರು ಅವನಿಗೆ ತುಂಬಾ ಕೆಲಸ ಮತ್ತು ದಿನ ಕೂಲಿಯೂ ಚೆನ್ನಾಗಿ ಸಿಗುತ್ತಿತ್ತು.

ತಾನು ಗಳಿಸಿದ ದುಡ್ಡು ಎಣಿಸುವದೊಂದೇ ಆನಂದ ಅವನಿಗೆ. ಎರಡನೆಯ ಯಾವ ಆನಂದವೂ ಮಾನಪ್ಪನಿಗೆ ಇರಲಿಲ್ಲ. ಸಂಜೆಯಾದೊಡನೆ ನೇಯುವದನ್ನು ಬಿಟ್ಟು, ಒಂದು ಮಿಣಿಮಿಣಿ ದೀಪ ಹಚ್ಚಿ ಮಾನಪ್ಪನು ರೊಟ್ಟಿ ಬಡೆಯುವನು. ಈ ಸಾದಾ ಊಟ ಮುಗಿಸಿ ಮತ್ತೆ ಮಗ್ಗದ ಹತ್ತಿರ ಬರುವನು. ಅಲ್ಲಿ ನೆಲದಲ್ಲಿ ಹುಗಿದ ಒಂದು ಕಬ್ಬಿಣ ಪಾತ್ರೆ ಇತ್ತು. ಅದರಲ್ಲಿದ್ದ ಬಂಗಾರ ನಾಣ್ಯಗಳನ್ನು ತೆಗೆದು ಎಣಿಸುತ್ತ ಕೂಡುವನು. ಬಾಗಿಲ, ಕಿಟಕಿ ಹಾಕಿ, ಮುಚ್ಚಿ ಆ ನಾಣ್ಯಗಳನ್ನು ಕೈಯಲ್ಲಿ ಆಡಿಸುತ್ತ ಕೂಡುವನು. ತನ್ನ ಎದೆಗೆ ಹಿಡಿಯುವನು. ಅವೇ ಅವನ ಜೀವನ ಸರ್ವಸ್ವವಾಗಿದ್ದವು.

ಬಂಗಾರ ನಾಣ್ಯ ಆ ಕಬ್ಬಿಣ ಪಾತ್ರೆಯಲ್ಲಿ ಹಿಡಿಸದಷ್ಟು ಆದವು. ಆಗ ಮಾನಪ್ಪನು ಚರ್ಮದ ಎರಡು ಚೀಲ ಮಾಡಿದನು. ಅದರಲ್ಲಿ ಆ ನಾಣ್ಯಗಳನ್ನು ತುಂಬಿದನು. ಬಂಗಾರದ ನಾಣ್ಯಗಳು ಹೆಚ್ಚಾಗುತ್ತಿದ್ದವು.

ಮಾನಪ್ಪ ಹರಕ ಅರಿವೆ ಹಾಕುತ್ತಿದ್ದ. ಸಾದಾ ಊಟ ಉಣತಿದ್ದ. ಹಾಲು ತುಪ್ಪ ತಿನ್ನುತ್ತಿದ್ದಿಲ್ಲ. ನೀರಿನೊಡನೆ ಒಣರೊಟ್ಟಿ ತಿನ್ನುವನು. ಬಂಗಾರದ ನಾಣ್ಯ ಹೇಗೆ ಹೆಚ್ಚಾಗುವವು ಇದೇ ಒಂದು ಚಿಂತೆ ಅವನಿಗೆ ಹಗಲೂ ರಾತ್ರಿ.

ಅವನ ಜೀವನ ಯಂತ್ರದಂತೆ ಆಗಿತ್ತು ಹಗಲೆಲ್ಲ ಖಟಕ್, ಖಟಕ್ ಎಂಬ ಮಗ್ಗದ ಸಪ್ಪಳ ಅವನ ಕಿವಿಯಲ್ಲಿ. ರಾತ್ರಿ ಬಂಗಾರದ ನಾಣ್ಯದ ನಾದ ಮೂರನೆ ದನಿಯು ಗುರುತೇ ಅವನಿಗಿದ್ದಿಲ್ಲ. ಅವನ ಕಣ್ಣು ವಿಚಿತ್ರ. ಅವುಗಳಲ್ಲಿ ಯಾವ ಭಾವವೂ ಇರಲಿಲ್ಲ. ಅವನ ದೃಷ್ಟಿಯೂ ಅರ್ಥಹೀನವಾಗಿತ್ತು, ಅದೂ ಯಾಂತ್ರಿಕವಾಗಿತ್ತು. ಮುಖ ಸಪ್ಪಗಾಗಿತ್ತು. ಅದರ ಮೇಲೆ ತೇಜವೂ ಇದ್ದಿಲ್ಲ. ಪ್ರಸನ್ನತೆಯೂ ಇರಲಿಲ್ಲ. ಮಾನಪ್ಪ ದೆವ್ವನಂತೆ ಕಾಣಿಸುತ್ತಿದ್ದ. ಊರ ಜನರಿಗೆ ಅವನನ್ನು ಕಂಡರೆ ಅಂಜಿಕೆ. ಆದರೂ ಹೆಣ್ಣು ಮಕ್ಕಳು ತಮ್ಮ ಮಕ್ಕಳನ್ನು ಕರೆದುಕೊಂಡು ಅವನ ಕಡೆ ಹೋಗುವರು. ಮಕ್ಕಳ ರೋಗದ ಮೇಲೆ ಇರುವ ಔಷಧದ ಜ್ಞಾನ ಅವನಿಗಿತ್ತು ಅವನು ಹೇಳುವ ಔಷಧ ತೀರ ಸಾದಾ ಇರುತ್ತಿದ್ದವು. ಸುತ್ತಮುತ್ತಲು ಅಥವಾ ಹಿತ್ತಲದಲ್ಲಿ ಸಿಗುವ ವನಸ್ಪತಿ, ಬೇರು, ತೊಪ್ಪಲ ಇವೇ ಅವನು ಹೇಳುವ ಔಷಧ. ಆದರೆ ಅವುಗಳಿಂದ ಹುಡುಗರು ನೆಟ್ಟಗಾಗುತ್ತಿದ್ದರು. ಹೆಣ್ಣು ಮಕ್ಕಳು ಅವನಿಗೆ ಧನ್ಯವಾದವನ್ನು ಕೊಡುವರು ಹೀಗಿದ್ದರೂ ಅವರಿಗೆ ಅವನ ವಿಷಯ ಒಂದು ಅಂಜಿಕೆ ಮನಸಿನಲ್ಲಿರುತ್ತಿತ್ತು. ಕೆಲವರು ಅನ್ನುತ್ತಿದ್ದರು. “ ಇವನಿಗೆ ದೆವ್ವಗಳು ವಶವಾಗಿವೆ. ಭೂತವಿದ್ಯೆ ಬರುತ್ತದೆ. ಅದರಿಂದ ಇವನು ರೋಗಗಳನ್ನು ನೆಟ್ಟಗೆ ಮಾಡುತ್ತಾನೆ. ಇಲ್ಲದಿದ್ದರೆ ಇಂಥ ಬೆಪ್ಪನ ಕಡೆಯಿಂದ ಹೇಗೆ ನೆಟ್ಟಗಾಗಬೇಕು ? ” ಮತ್ತೆ ಕೆಲವರು ಅನ್ನುತ್ತಿದ್ದರು, “ ಇವನಿಗೆ ಯೋಗ ವಿದ್ಯೆ ಬರುತ್ತದೆ. ಇವನು ತನ್ನ ಪ್ರಾಣವನ್ನು ಬೇಕಾದಲ್ಲೆ ಒಯ್ಯುತ್ತಾನೆ. ಮತ್ತೆ ತಿರುಗಿ ತನ್ನ ದೇಹದಲ್ಲಿ ಬರುತ್ತಾನೆ. ” ಹೀಗೆ ಅವನ ವಿಷಯ ಜನರಲ್ಲಿ ನಾನಾ ರೀತಿಯ ಕಲ್ಪನೆಗಳಿದ್ದವು.

ಮಕ್ಕಳು ಅವನ ಮನೆಯಲ್ಲಿ ಹಣಕಿ ಹಾಕಿ ಅನ್ನುವರು, “ ದೆವ್ವ ನೇಯುತದ ನೋಡಿರಿ. ಹ್ಯಾಂಗ ಕಾಣಸತಾನ ನೋಡಿರಿ ಮುದುಕ ?” ಕೆಲವರು ‘ಏ, ಮುದಿಮಾನಪ್ಪ’ ಅಂದರೆ ಅವನು ಅವರ ಕಡೆ ನೋಡಿದೊಡನೆ ಓಡಿಹೋಗುವರು.

ಹೀಗೆ ಜನರು ಅವನಿಗೆ ಅಂಜಿದರೂ ಅವನು ಯಾರಿಗೂ ಉಪದ್ರವ ಮಾಡುವವನಲ್ಲ ಎಂದು ಎಲ್ಲರಿಗೂ ಗೊತ್ತಾಗಿತ್ತು. ಹದಿನೈದು ವರ್ಷದಲ್ಲಿ ಯಾರೊಡನೆ ಜಗಳವಿಲ್ಲ, ಬಡದಾಟವಿಲ್ಲ ಜನರು ಕೊಟ್ಟಷ್ಟು ನೇಯುವ ಕೂಲಿ ತಕ್ಕೊಳ್ಳುತ್ತಿದ್ದ. ಜನರಿಗೆ ಅವನನ್ನು ಕಂಡರೆ ಕನಿಕರ ಒಬ್ಬಂಟಿಗ, ಗೆಳೆಯರಿಲ್ಲ ಮಕ್ಕಳಿಲ್ಲ ಇವನು ಹೇಗೆ ಇರುತ್ತಾನೋ, ಪಾಪ, ಎಂದು ಎಲ್ಲರಿಗೂ ಅನಿಸುವದು.

ಮಾನಪ್ಪನ ಭಾವನೆಗಳೆಲ್ಲ ಸತ್ತು ಹೋಗಿದ್ದವು. ಅವನ ಪ್ರೀತಿ ಎಲ್ಲ ಬಂಗಾರದ ನಾಣ್ಯದಲ್ಲಿತ್ತು. ತಾಯಿತಂದೆ ಮಕ್ಕಳನ್ನು ಆಡಿಸುವಂತೆ, ಅವನು ಬಂಗಾರ ನಾಣ್ಯಗಳನ್ನು ಆಡಿಸುವನು. ಕೈಯಲ್ಲಿ ಆಡಿಸಿ, ಆಡಿಸಿ ಅವು ನುಣುಪಾಗಿದ್ದವು. ನೂರಾದವು, ನೂರಾ ಇಪ್ಪತ್ತೈದು ಆದವು ಇನ್ನು ನೂರೈವ್ವತ್ತು ಆಗುವವು. ಎರಡು ನೂರಾಗುವವು ಎಂದು ಅವುಗಳಿಗೆ ಮುದ್ದಿಡುವನು.

ಒಮ್ಮೊಮ್ಮೆ ಅವನ ಹೃದಯದಲ್ಲಿದ್ದ ಭಾವನೆ ಉಕ್ಕೇರಿ ಬರುವದು. ಅವನಲ್ಲಿ ಬಹಳ ವಸ್ತುಗಳಿರಲಿಲ್ಲ. ಒಂದು ಮಣ್ಣಿನ ಕೊಡವಿತ್ತು ಅದರ ಮೇಲೆ ಅವನ ಜೀವ ಬಹಳ. ದಿನಾಲು ಬಾವಿಗೆ ಹೋಗಿ ಅದನ್ನು ತುಂಬಿ ತಂದಿಡುವನು ಸಾವಕಾಶವಾಗಿ ಅದನ್ನು ತಿಕ್ಕಿ ಇಡುವನು. ಅದರಲ್ಲಿದ್ದ ನಿರ್ಮಲವಾದ ನೀರಿನತ್ತ ನೋಡುತ್ತ ಕೂಡುವನು. ಮನುಷ್ಯನ ತಲೆಗಿಂತ ಈ ಕೊಡ ನಿರ್ಮಲವಿತ್ತು. ತಲೆಯಲ್ಲಿ ಹೊಲಸು ವಿಚಾರ ಬರುವವು, ಆದರೆ ನನ್ನ ಈ ಕೊಡದಲ್ಲಿ ನೀರು ನಿರ್ಮಲವಾಗುತ್ತದೆ ಎಂದು ಅನ್ನುವನು.

ಒಂದು ದಿನ ಈ ಕೊಡ ಒಡಿಯಿತು ಮೂರು ತುಂಡಾದವು. ಮಾನಪ್ಪನ ಜೀವ ಹೋದಂತಾಯಿತು. ಮೂರು ತುಂಡುಗಳಲ್ಲಿ ಮೂರು ಲೋಕಗಳಿದ್ದವು. ಆ ತುಂಡಿನತ್ತ ನೋಡುತ್ತ ಕೂತನು. ಇಷ್ಟು ದಿನ ಆ ಕೊಡ ಅವನಿಗಾಗಿ ಸವೆದಿತ್ತು. ಹದಿನೈದು ವರುಷ ನಿರ್ಮಲ ನೀರು ಅವನಿಗೆ ಕೊಟ್ಟಿತ್ತು ಅದೊಂದು ಅವನ ಜೀವನದ ಭಾಗವಾಗಿತ್ತು. ಆ ಕೊಡ ನಿರ್ಜೀವವಿದ್ದಿಲ್ಲ. ಅದು ಅವನೊಡನೆ ಮಾತು ಆಡುತ್ತಿತ್ತು, ನಗುತ್ತಿತ್ತು. ಆದರೆ ಇಂದು ಆ ಕೊಡ ಒಡೆಯಿತು. ಅವನ ಜೀವದ ಗೆಳೆಯ ಹೋದ. ಮಾನಪ್ಪನು ಅದರಿಂದ ಆ ಮೂರು ತುಂಡು

ಗಳನ್ನು ತಕ್ಕೊಂಡು ಹೇಗೊ ಕೂಡಿಸಿ ಇಟ್ಟ. ಅದು ಆ ಕೊಡದ ಸ್ಮಾರಕ ವಾಗಿತ್ತು. ಒಡೆದ ಕೊಡಕ್ಕೆ ತನ್ನ ಪ್ರೇಮದಿಂದ ಪುನರ್ಜನ್ಮವಿತ್ತನು. ಆದರೆ ಇನ್ನು ನೀರಿಡಲು ಉಪಯೋಗವಾಗುವಂತೆ ಇದ್ದಿಲ್ಲ.

ಮಾನಪ್ಪನ ಗುಡಿಸಲದಲ್ಲಿದ್ದ ಎಲ್ಲ ವಸ್ತುಗಳಲ್ಲಿ ಜೀವ ಇತ್ತು. ಮಗ್ಗ ಹಾಡುತ್ತಿತ್ತು. ಒಡಕ ಕೊಡ ಮಾತನಾಡುವದು. ಬಂಗಾರದ ನಾಣ್ಯ ಗಳೆಂದರೆ ಆನಂದದ ಕಣಿ. ಆ ಗುಡಿಸಲದಲ್ಲಿಯ ಎಲ್ಲ ವಸ್ತುಗಳೆಂದರೆ ಅವನ ಗೆಳೆಯರು. ಅದೇ ಅವನ ಕುಟುಂಬ. ಅವೇ ಅವನ ಮಕ್ಕಳು. ಹೀಗೆ ನಡೆದಿತ್ತು ಅವನ ಜೀವನ. ಈಗ ಅವನ ಮುಖದ ಮೇಲೆ ಮುದಿ ಕಳೆ ಬಂದಿತ್ತು. ಅವನು ನಾಲ್ವತ್ತು ವರುಷದವನಿದ್ದ. ಎಲ್ಲರೂ ಅವನಿಗೆ ಈಗ “ ಮುದುಕ ಮುದುಕ ” ಅನ್ನಲಿಕ್ಕೆ ಹತ್ತಿದರು

———

# ಪ್ರಕರಣ ೧

## ಜಮೀನದಾರನೂ ಇಬ್ಬರು ಮಕ್ಕಳೂ,

ರಾಯಗಾವದಲ್ಲಿ, ದಿಗಂಬರರಾಯರು ಒಬ್ಬ ದೊಡ್ಡ ಜಮೀನದಾರರು. ಊರವರೆಲ್ಲರೂ ಅವರಿಗೆ ಆದರ ಮಾಡುವರು. ಏನಾದರೂ ನ್ಯಾಯಗಳಿದ್ದರೆ ಅವನ್ನೆಲ್ಲ ಅವರೇ ತೀರಿಸುವರು. ಅವರಿಗೆ ಇಬ್ಬರು ಮಕ್ಕಳು. ಒಬ್ಬನ ಹೆಸರು ಸಂಪತರಾಯ, ಇನ್ನೊಬ್ಬನ ಹೆಸರು ಠಕಸೇನ. ದಿಗಂಬರರಾಯರ ಹೆಂಡತಿ ತೀರಿಕೊಂಡಿದ್ದಳು. ಮನೆಯಲ್ಲಿ ಅಡಗಿಯವನು ಇದ್ದ. ಮನೆಯಲ್ಲಿ ಎಲ್ಲ ಅಸ್ತಾವ್ಯಸ್ತ. ಹೆಣ್ಣುಮಕ್ಕಳಿದ್ದರೆ ಮನೆಯಲ್ಲಿ ವ್ಯವಸ್ಥೆ ಉಳಿಯುತ್ತದೆ. ಸ್ತ್ರೀ ಇಲ್ಲದೆ ಮನೆಗೆ ಶೋಭೆ ಇಲ್ಲ ಮನೆಗೆ ಅಡವಿಯ ರೂಪ ಬರುತ್ತದೆ; ಔದಾಸೀನ್ಯದ ವಾತಾವರಣ ತುಂಬಿಬರುತ್ತದೆ.

“ಸಂಪತ, ಇನ್ನು ನೀನು ಮದುವೆಯಾಗು. ದಲಪತರಾಯರ ಮಗಳಾದ ಇಂದೂ ನಿನಗೆ ಯೋಗ್ಯಳಾಗಿದ್ದಾಳೆ. ಅವರ ಮನೆತನವೂ ದೊಡ್ಡದು. ಇಂಧೂನೂ ನಿನ್ನನ್ನು ಪ್ರೀತಿಸುತ್ತಿದ್ದಾಳೆ. ನಿನ್ನನ್ನು ಅವಳು ಪ್ರೀತಿಸುತ್ತಿದ್ದಾಳೆಂದು ತಿಳಿದದ್ದರಿಂದ ಅವಳ ತಂದೆ ಅವಳ ಮದುವೆ ಇನ್ನೂ ಮಾಡಿಲ್ಲ ಸಂಪತ ನೀನು ಏಕೆ ಮದುವೆ ಬೇಡ ಅನ್ನುತ್ತಿ ? ಕಾಲಕ್ಕೆ ಸರಿಯಾಗಿ ಎಲ್ಲವನ್ನು ಮಾಡಬೇಕು. ನಿನಗೆ ಈಗ ಇಪ್ಪತ್ತೈದು ವರುಷ. ಕೇಳು, ನನ್ನ ಮಾತು. ನಾನೀಗ ಮುದುಕನಾಗಿದ್ದೇನೆ ಸಾಯುವ ಮೊದಲು ಮನೆಗೆ ಕಳೆ ಬಂದದ್ದು ಕಾಣಲಿ. ಸೊಸೆ ಬಂದರೆ ಮನೆಗೆ ಭೂಷಣ. ಮನೆಯಲ್ಲಿ ಎಲ್ಲೆಡೆಯಲ್ಲಿ ಆನಂದ ಹಬ್ಬುವದು. ಮನೆ ವ್ಯವಸ್ಥಿತವಾಗುವದು. ಈಗ ಮನೆ ಎಂದರೆ ಧರ್ಮಶಾಲೆಯಾಗಿದೆ. ಸ್ತ್ರೀ ಇಲ್ಲದೆ ಮನೆ ಮನೆಯಾಗುವದಿಲ್ಲ. ಮದುವೆ ಮಾಡಿಕೊಳ್ಳುತ್ತೀಯಲ್ಲ ? ” ಎಂದು ತಂದೆ ಕೇಳಿದ.

" ಅಪ್ಪ. ಇಂದೂ ನನ್ನನ್ನು ಪ್ರೀತಿಸುತ್ತಾಳೆಂಬ ಮಾತಿನ ಅರಿವು ನನಗಿದೆ. ಅವಳು ಆಶೆಯಿಂದ ನೋಡುತ್ತಾಳೆ. ಆದರೆ ಇನ್ನು ಸ್ವಲ್ಪದಿನ ನಿಲ್ಲಿರಿ. ನಾನೇನು ನಿಮ್ಮ ಮಾತು ಮೀರುವದಿಲ್ಲ. " ಸಂಪತ ಅಂದನು.

" ನೀನು ಒಳ್ಳೆಯವ ಆ ಠಕಸೇನ ಬೇಕಾದ್ದೆ ಮಾಡತಾನೆ. ಅವನಿವೆ ನಿರ್ಬಂಧವೇ ಇಲ್ಲದಂತಾಗಿದೆ. ನೀನೇ ನನ್ನ ಆಶೆ. ನಮ್ಮ ಮನೆತನದ ಪರಂಪರೆ ಕಾಯು; ನಮ್ಮ ಮನೆತನದ ಪ್ರತಿಷ್ಠೆ ಉಳಿಸು, ಬೆಳೆಸು ಸಂಪತ, ಎಲ್ಲ ಲೆಖ್ಖ ಪತ್ರವ್ಯವಹಾರ ನೀನೇ ನೋಡಲು ಆರಂಭಿಸು ತಿಳಿಯಿತೆ ? " ತಂದೆ ಅಂದ.

" ಹೌದು, ನಾನೇ ನೋಡುವೆನು. ಅಂದರೆ ನಿಮಗೂ ತೊಂದರೆ ಕಡಿಮೆಯಾಗುವದು. ನಿಮ್ಮ ಸುಖದಲ್ಲಿದೆ ನನ್ನ ಸುಖ. " ಸಂಪತ ಅಂದನು.
ಒಂದು ದಿನ ಸಂಪತನು ಲಾವಣಿ ಹಣ ವಸೂಲ ಮಾಡಿಕೊಂಡು ಬರುತಿದ್ದ. ನಾಲ್ಕು ಐದು ನೂರು ರೂಪಾಯಿಗಳಿದ್ದವು. ಯಾವಾಗ ತಂದೆಗೆ ಹೇಳುವೆನೆಂದು ಅನಿಸಿತು. ಅಷ್ಟರಲ್ಲಿ ಅವನ ತಮ್ಮ ಎದುರಾದ ಅವನನ್ನು ತಪ್ಪಿಸಲು ಸಂಪತ ಪ್ರಯತ್ನ ಮಾಡಿದನು. ಆದರೆ ಠಕಸೇನ ಬಂದನು.

" ಅಣ್ಣಾ, ಹೀಗೆ ತಮ್ಮನನ್ನು ಏಕೆ ತಪ್ಪಿಸುತ್ತಿ ? ನಿನ್ನನ್ನು ಬಿಟ್ಟರೆ ನನನಗೆ ಸಮಾಧಾನವೆನಿಸುವದಿಲ್ಲ. ಎಲ್ಲಿ ಇದ್ದರೂ ನನಗೆ ನಿನ್ನ ನೆನಪು. ನೆನಪಾದಕೂಡಲೇ ನಾನು ನಿನ್ನ ಭೆಟ್ಟಿಗೆ ಬರುತ್ತೇನೆ. ಈಗ ಬಹಳ ದಿನಗಳ ಮೇಲೆ ಬಂದಿದ್ದೇನೆ. ನನ್ನನ್ನು ಕಂಡು ನಿನಗೆ ಆನಂದವಾಗುವದಿಲ್ಲವೇ ? " ಠಕಸೇನ ಅಂದ.

" ಠಕಸೇನ, ಅಪ್ಪನಿಗೆ ನೀನು ಸೇರುವದಿಲ್ಲ. ಆದ್ದರಿಂದ ನನಗೂ ನಿನ್ನ ಮೇಲೆ ಪ್ರೀತಿ ಇಲ್ಲ ನೀನು ಮನಬಂದಂತೆ ನಡೆಯುತ್ತಿ. ದುಡ್ಡು ಹಾಳು ಮಾಡುತ್ತಿ. ಯಾವ ನಿರ್ಬಂಧವಿಲ್ಲ ನಿನ್ನ ಮೇಲೆ. ನಮ್ಮ ಮನೆತನದ ದೊಡ್ಡಿಸ್ತಿಕೆ ವಿಷಯ ನಿನಗೆ ಚಿಂತೆ ಇಲ್ಲ. ಜನ ನಿನನ್ನು ನೋಡಿ ನಗುತ್ತಾರೆ. ನಿನ್ನ ಕೂಡ ನಾನು ಓಡಾಡದರೆ ನನಗೂ ಹೆಸರಿಡುವರು. " ಸಂಪತ ಅಂದನು.

" ಅಣ್ಣಾ, ನೀನು ನನ್ನನ್ನು ಪ್ರೀತಿಸದಿದ್ದರೂ ನಾನು ನಿನ್ನನ್ನು ಪ್ರೀತಿಸುತ್ತೇನೆ. ನನಗೆ ಬೇಕದ ವಸ್ತುವನ್ನು ನಾನು ನಿನ್ನ ಹೊರ್ತು ಬೇರೆ

ಯಾವರ ಕಡೆ ಕೇಳುವದಿಲ್ಲ ಇಲ್ಲ ಇಲ್ಲ ಅಂದು ನೀನು ಕೊಡತೀದಿ ಮೇಲೆ ತೋರಿಸದಿದ್ದರೂ ನನ್ನ ವಿಷಯ ನಿನ್ನಲ್ಲಿ ಸಹಾನುಭೂತಿ ಇದ್ದೆ ಅದೆ. ಅಣ್ಣಾ, ನಾನು ಈಗ ತೊಂದರೆಯಲ್ಲಿದ್ದೇನೆ. ನನಗೆ ಮುನ್ನೂರು ರೂಪಾಯಿ ಬೇಕು. ಇಲ್ಲ ಅನಬೇಡ. ಬೇಕಾದಲ್ಲಿಂದ ಕೊಡು. ” ಠಕಸೇನ ಅವನ ಕೈ ಹಿಡಿದು ಕೇಳಿದನು.

“ ಎಲ್ಲಿಂದ ತರಲಿ ರೊಕ್ಕ. ಹೋದಸಲ ಕೊಟ್ಟಿದ್ದೆ. ಇವತ್ತು ಎಲ್ಲಿಂದ ಕೊಡಲಿ ? ಅಪ್ಪನಿಗೆ ಲೆಖ್ಖ ಒಪ್ಪಿಸಬೇಕು. ಹೋಗಲಿ ನನಗೆ . ” ಸಂಪತ ಸಿಟ್ಟಿಗೆದ್ದು ಅಂದನು.

“ ನಾನು ನಿನ್ನ ಕೈ ಬಿಡುವದಿಲ್ಲ. ನೀನೆ ನನಗೆ ಆಧಾರ. ನೀನು ಅಣ್ಣ. ನೀನು ಈಗ ನನಗೆ ರೊಕ್ಕ ಕೊಡಲೇಬೇಕು. ಕೊಡುವದಿಲ್ಲವೆ ? ನೋಡು, ನಿನ್ನ ವಿಷಯ ಇದ್ದ ಆ ಗುಪ್ತ ಮಾತು, ಅಣ್ಣಾ, ನಾನೇಕೆ ಮುಂದಿಗೆ ಹೇಳಲಿ ? ನೀನಂದರೆ ನಮ್ಮ ಕುಲದ ಭೂಷಣವಲ್ಲವೇ ? ಆ ಮಾತು ನಾನು ಯಾರಿಗೂ ಹೇಳಿಲ್ಲ. ಈಗ ನನಗೆ ಬೇಕಾದ್ದು ಮೂರುನೂರು ರುಪಾಯಿ ಮಾತ್ರ. ಹೆಚ್ಚು ಬೇಡ ” ಠಕಸೇನ ನಗುತ್ತ ಅಂದನು

“ ತಗೋ; ನೀ ಅಂದರೆ ನನ್ನ ಬೆನ್ನಹತ್ತಿದ ಪಿಶಾಚಿ ಇದ್ದಿ. ಮತ್ತ ಬೇಡ ಬೇಡ. ”

“ ಗರಜು ಇದ್ದರೆ ಕೇಳುವೆ. ನಿನ್ನ ಕಡೆಗಲ್ಲದೆ ಮತ್ತಾರಕಡೆ ಕೇಳಲಿ. ಪಿಶಾಚಿ ಅನ್ನು ಬೇಕಾದ್ದು ಅನ್ನು, ರೊಕ್ಕ ಕೇಳಿದಾಗ ಕೊಡು ಅಂದ ರಾಯಿತು ನಿನ್ನ ಗುಪ್ತಮಾತು ಯಾರಿಗೂ ಹೇಳುವದಿಲ್ಲ ಅಲ್ಲವೆ ? ” ಹೀಗಂದು ಠಕಸೇನ ಹೋದನು.

ಠಕಸೇನನ ಉಪದ್ವ್ಯಾಪಗಳು ನಡಬೇ ಇದ್ದವು. ಕುಬೇರನೂ ಭಿಕ್ಷಾ ಪಾತ್ರ ಹಿಡಿಯುತ್ತಿದ್ದ ಅವನ ಗರಜ ಪೂರೈಸಲು ಹೋಗಿದ್ದರೆ. ತಿನಬೇಕು, ಕುಡಿಯುಬೇಕು, ಚೈನಿ ಮಾಡಬೇಕು ಇದರ ಹೊರ್ತು ಬೇರೆ ಕೆಲಸವೇ ಅವನಿಗೆ ಇರಲಿಲ್ಲ ಅವನು ರಾಯುಗಾವದಲ್ಲಿ ಇರತಿರಲಿಲ್ಲ. ಎಲ್ಲಿಯಾದರೂ ಬೇರೆ ಊರಿಗೆ ಹೋಗುವನು. ರೊಕ್ಕ ತೀರಿದರೆ ಊರಿಗೆ ಬರುವನು. ಮತ್ತು ತನ್ನ ಅಣ್ಣನ ಬೆನ್ನು ಹತ್ತುವನು. ಏನಿತ್ತೋ ಏನೋ, ಅಣ್ಣನು ಅವನಿಗೆ ಅಂಜತಿದ್ದ. ಅವನ ವಿಷಯ ಯಾವದೋ ಗುಪ್ತ ಮಾತು ಠಕಸೇನನಿಗೆ ಗೊತ್ತಿತ್ತು. ಆದರಿಂದ ಅವನು ಅಣ್ಣನಿಂದ ರೊಕ್ಕ ಹೀರುತ್ತಿದ್ದನು.

ಠಕಸೇನ ರೂಪಾಯಿ ತಗೊಂಡ ಹೋದ. ಮೂರು ತಿಂಗಳ ಆಗಲಿಲ್ಲ. ಅಷ್ಟರಲ್ಲಿ ತಿರುಗಿ ಬಂದ. ಮತ್ತೆ ಅಣ್ಣನ ಬೆನ್ನು ಹತ್ತಿದ. ಈಗ ಅವನಿಗೆ ಐದು ನೂರು ರೂಪಾಯಿ ಬೇಕಾಗಿದ್ದವು.

“ ಅಣ್ಣಾ ಐನೂರು ರೂಪಾಯಿ ಬೇಕು. ” ಅವನು ಅಂದ.

“ ನಿನ್ನ ಅಣ್ಣನ ಮಾರಿ ತಗೊ ” ಸಂಪತ ಅಂದ.

“ ಅಣ್ಣನನ್ನು ಹೇಗೆ ಮಾರಬೇಕು. ಬಹಳ ಆದರ ನಿನ್ನ ಕುದುರೆ ಮಾರಬಹುದು. ನಿನ್ನ ಕುದುರೆ ಮಾರಿದರೆ ಐದುನೂರು ರೂಪಾಯಿ ಸಹಜ ಸಿಗಬಹುದು. ಕೊಡತಿಯಾ ನಿನ್ನ ಕುದುರಿ ಅಣ್ಣ ? ಕೊಡು. ನಾಳಿನ ಸಂತೆಯಲ್ಲಿ ನಾನು ಅದನ್ನು ಮಾರುವೆ. ಅಣ್ಣ, ನೀನೆ ನನ್ನ ಆಧಾರ. ಮತ್ತೆ, ನಿನ್ನ ಆ ಮಾತು ನಾನು ಯಾರ್‍ಯಾರಿಗೂ ಹೇಳುವದಿಲ್ಲ ” ಹೀಗೆ ಠಕಸೇನ ನಗುತ್ತ ಅಂದನು.

“ ಕುದುರೆ ಹೇಗೆ ಮಾರುವದು ? ” ಸಂಪತ ಸಿಟ್ಟಿಗೆದ್ದು ಅಂದ

“ ಹೇಗಂದರೆ ? ಸಂತೆಯಲ್ಲಿ. ನಾ ಮಾರುವೆ. ನೀ ಬರಬೇಡ. ಅದು ನಿನ್ನ ಮಾನಕ್ಕೆ ಕುಂದು ತರುವಂತಿದೆ. ತಗೊಂಡು ಹೋಗಲ್ಯಾ ಆ ಕುದುರೆ ? ” ಅವನು ಮತ್ತೆ ಕೇಳಿದ.

“ ಅಪ್ಪ, ಏನನ್ನುವರು ? ” ಸಂಪತ ಬಿನ್ನನಾಗಿ ಅಂದ.

“ ಸ್ವಲ್ಪ ಹೊತ್ತು ಸಿಟ್ಟಿಗೇಳುವರು. ಆಮೇಲೆ ತಾವೇ ಸುಮ್ಮನಾಗುವರು. ನನು ನೆರೆಯ ಊರಿಗೆ ಒಯ್ಯುವೆ. ನಾಳೆ ಅಲ್ಲೆ ದನದ ಸಂತೆ ಇದೆ. ನನ್ನ ಅಡಚಣಿಯು ದೂರಾಗುವದು. ನನ್ನ ಮೇಲೆ ನಿನ್ನ ಪ್ರೀತಿಯು ಇದ್ದೇ ಇದೆ. ” ಹೀಗಂದು ಠಕಸೇನ ಹೋದನು.

ನೆರೆಯ ಊರಲ್ಲಿ ದನದ ಸಂತೆ ಕೂಡಿತ್ತು. ಉತ್ತಮವಾದ ಕುದುರೆ ಮಾರಲಿಕ್ಕೆ ಬಂದಿದ್ದವು. ಠಕಸೇನನು ಕುದುರೆ ತಗೊಂಡು ನಿಂತಿದ್ದ. ಆ ಕುದುರೆ ಸುತ್ತುಮುತ್ತಲಿನ ಪ್ರದೇಶದಲ್ಲಿ ಪ್ರಸಿದ್ಧವಿತ್ತು. ಬಹಳ ಮಂದಿಯ ಕಣ್ಣು ಆ ಕುದುರೆಯ ಮೇಲಿತ್ತು. ಆದರೆ ಸಂಪತರಾಯನು ಯಾರಿಗೂ ದಾದುಮಾಡಿದ್ದಿಲ್ಲ.

ಆ ಕುದುರೆಯ ಸುತ್ತು ಬಹಳ ಜನ ಸುಳಿಯುತ್ತಿತ್ತು.

" ಒಂದು ಸಾವಿರ ರೂಪಾಯಿ ಕೊಡತೇವಿ ಎಂದು ಬಂದಿದ್ದರು. ಕುದುರೆ ಅಂದರೆ ಕುದುರೆ ಅದೆ. " ಠಕಸೇನ ಅಂದನು

" ಯಾರಿಗೆ ಬೇಕು, ಈ ನಿಮ್ಮ ಕುದುರೆ. ಐದು ನೂರಕ್ಕೆ ಸಹ ಯಾರೂ ಕೇಳುವದಿಲ್ಲ. " ಒಬ್ಬನು ಅಂದನು.

" ತಾವಾಗಿ ತಮ್ಮ ವಸ್ತು ಸಂತೆಯಲ್ಲಿ ತಂದರೆ ಅದರ ಬೆಲೆ ಕಡಿಮೆಯಾಗುತ್ತದೆ" ಇನ್ನೊಬ್ಬನು ಅಂದನು.

" ನಿಜವಾಗಿ ನಿಮಗೆ ಇದನ್ನು ಮಾರಬೇಕಾಗಿದೆಯೆ ? ಮೂರನೇಯವ ಕೇಳಿದ.

" ಯೋಗ್ಯ ಬೆಲೆ ಬಂದರ ಕೊಡತೇನಿ. ಇಲ್ಲಿದ್ದರ ನನಗೇನು ಅಂಥ ಅಡಚಣಿ ಇಲ್ಲ. " ಠಕಸೇನ ಅಂದನು.

" ಜನರಿಗೂ ಏನು ಅಡಚಣಿ ಇಲ್ಲ. ಆದರೆ ಸಂಪತರಾಯರ ಕುದುರೆ ನಿಮ್ಮಕಡೆ ಹ್ಯಾಂಗ ಬಂತು ? " ಯಾವನೋ ಒಬ್ಬವ ಕೇಳಿದ.

" ನಾವಿಬ್ಬರು ಅಣ್ಣತಮ್ಮ. ಅಣ್ಣ ನಮಗಿದನ್ನು ಬಕ್ಷೀಸ ಕೊಟ್ಟಾನ. " ಠಕಸೇನ ಅಂದ.

" ಬಕ್ಷೀಸ ಸಿಕ್ಕ ವಸ್ತುವನ್ನು ಯಾರಾದರೂ ಮಾರುತ್ತಾರೆಯೋ ? " ಒಬ್ಬ ಕೇಳಿದ.

" ಅಡಚಣಿ ಬಂದರೆ, ಭಾವನೆಯನ್ನು ದೂರ ಸರಿಸಬೇಕಾಗುತ್ತದೆ. " ಇನ್ನೊಬ್ಬವ ಅಂದ.

" ಐದುವರಿ ನೂರಕ್ಕೆ ಕೊಡತೀರಿ ಏನು ? ಕೊಡೋದ ಇದ್ದರ ನಾಳೆ ನಮ್ಮೂರಿಗೆ ತಗೊಂಡು ಬರ್ರಿ. ರೊಕ್ಕ ಕೊಡತೇನಿ. ಇವತ್ತು ಮಾತು ಮುಗಿಸೋಣ. " ಒಬ್ಬ ಗಟ್ಟಿಯಾಗಿ ಕೇಳಿದ.

" ಒಳ್ಳೇದು ಐದೂವರಿನೂರಿಗೆ ಕೊಡತೇನಿ. ನಿಮಗೆ ಚಲೋ ಕುದುರೆ ಬೇಕು ಎಂದು ತೋರುತ್ತದೆ. ನಿಮ್ಮಲ್ಲಿ ಇರಬೇಕು ಇಂಥಾ ಕುದುರೆ. ಬರೆ ದುಡ್ಡಿನ ಕಡೆ ನೋಡಿದರೆ ಸಾಗುವದಿಲ್ಲ. " ಠಕಸೇನ ಅಂದನು. ಸಂತೆಯಾಯಿತು. ಜನರು ತಮ್ಮ ತಮ್ಮ ಮನೆಗೆ, ಊರಿಗೆ ಹೊರಟರು. ಠಕಸೇನನೂ ತನ್ನ ಕುದುರೆಯ ಮೇಲೆ ಕೂತು ಹೊರಟನು. ನಾಳೆ ಕುದುರೆ ಎರಡನೆಯ

ವರ ಮನೆಗೆ ಹೋಗುವದಿತ್ತು. ಅವನ ಅಣ್ಣ ಅವನಿಗೆ ಕುದುರೆ ಮೇಲೆ ಕೂಡಿಸಿಕೊಡುತ್ತಿದ್ದಿಲ್ಲ. ಇವತ್ತ ಕುದುರೆಯ ಮೇಲೆ ಮನತುಂಬ ಕೂತು ಕೊಳ್ಳಬೇಕೆಂದು ಮಾಡಿದ. ಕುದುರೆಗೆ ಒಂದು ಏಟು ಹೊಡೆದ ಕುದುರೆ ಗಾಳಿಯಂತೆ ಹೊರಟಿತು ತಕಸೇನನಿಗೆ ಅದನ್ನು ತಡೆಯುವದಾಗಲಿಲ್ಲ. ಕತ್ತಲ ಕವಿದಿತ್ತು. ಮುಂದಿನದು ಏನು ಕಾಣವಲ್ಲದು ಅವನಿಗೆ. ಕುದುರೆ ಒಂದು ತಗ್ಗಿನಲ್ಲಿ ಬಿತ್ತು. ಠಕಸೇನ ಒಂದು ಬಾಜುಕ್ಕೆ ಬಿದ್ದ. ಅವನಿಗೆ ಬಹಳ ಹೊಡೆತ ಬಿತ್ತು. ಆದರೂ ಸಂಕಟಪಟ್ಟು ಕುದುರೆಯ ಹತ್ತರ ಹೋದ ಅದರ ಪ್ರಾಣ ಹೋಗಿತ್ತು. ಇನ್ನು ದುಡ್ಡು? ಐದುವರಿ ನೂರುರೂಪಾಯಿ ಕೊಡುವವರಾರು? ಇವತ್ತ ಸಾಯೋದು ನಾಳೆ ಸತ್ತಿದ್ದರ? ಠಕಸೇನನಿಗೆ ಕುದುರೆ ಸತ್ತಿದ್ದು ಏನೂ ಅನಿಸಲಿಲ್ಲ. ಆದರೆ ದುಡ್ಡಿನ ಪ್ರಶ್ನೆ ಅವನ ಮುಂದೆ ಇತ್ತು.

ಅವನು ಎದ್ದ. ಕತ್ತಲಲ್ಲಿ ಎಡವುತ್ತ ಹೊರಟ ಕೈಯಲ್ಲಿ ಬಂಗಾರದ್ದ ಹಿಡಕಿಯ ಚಬಕ ಇತ್ತು. ಊರು ಸಮೀಪ ಇತ್ತು ಈಗ ಮೊದಲು ಹಾದಿಯಲ್ಲಿ ನೇಕಾರ ಮಾನಪ್ಪನ ಮನೆ ಹತ್ತುತ್ತಿತ್ತು. ಮಾನಪ್ಪ? ದೆವ್ವ ನಂತೆ ಕಾಣುವ ಮಾನಪ್ಪ! ಅವನ ಹತ್ತರ ದುಡ್ಡು ಬಹಳ ಇತ್ತು. ಬಂಗಾ ರದ ನಾಣ್ಯದಿಂದ ತುಂಬಿದ ಚೀಲ! ಇವನ ಮನೆಯ ಮೇಲೆ ದರೋಡೆ ಹಾಕಿದರೆ? ಒಮ್ಮೆಲೆ ಹೋಗಿ ಮಾನಪ್ಪನನ್ನು ಅಂಜಿಸಿದರೆ? ಏನಾರ ಮಾಡಿ ಈ ದುಡ್ಡು ನೆಗವಬೇಕೆಂಬ ವಿಚಾರ ಅವನ ತಲೆಯಲ್ಲಿ ಬಂತು. ಬಂಗಾರದ ನಾಣ್ಯಗಳು ಅವನ ಕಣ್ಣಿದರು ಕಾಣಲಿಕ್ಕೆ ಹತ್ತಿದವು. ಅವನಿಗೆ ಕನಸಿನಲ್ಲಿ ಇದ್ದಂತೆ ಅನಿಸಿತು.

ಅಷ್ಟರಲ್ಲಿ ತಂಗಾಳಿ ಬೀಸಹತ್ತಿತು. ಬಿರುಗಾಳಿ ಎದ್ದಿತು. ಆಕಾಶದಲ್ಲಿ ಕಾರ್ಮೋಡಗಳು ಕಾಣಹತ್ತಿದವು. ಮತ್ತಿಷ್ಟು ಕತ್ತಲಾಯಿತು. ಠಕಸೇನ ವೇಗದಿಂದ ನಡೆದ. ನೇಕಾರ ಮಾನಪ್ಪನ ಗುಡಿಸಲ ಕಂಡ. ಬಾಗಿಲ ತೆರೆದಿದ್ದಿತ್ತು. ಒಲೆಯಲ್ಲಿ ಬೆಂಕಿ ಕಾಣುತ್ತಿತ್ತು. ಮಿಣಿ ಮಿಣಿ ದೀಪ ಇತ್ತು. ಆದರೆ ಮಾನಪ್ಪ ಎಲ್ಲಿದ್ದ? ಅವ ಅಲ್ಲಿದ್ದಿಲ್ಲ. ದುಡ್ಡು ಬಿಟ್ಟು ಎಲ್ಲಿ ಹೋಗಿದ್ದ?

ಠಕಸೇನನು ಹಣಕಿ ಹಾಕಿ ನೋಡಿದ. ಒಳಗೆ ಯಾರೂ ಇದ್ದಿಲ್ಲ. ಆದರೂ ಅಲ್ಲಿ ಸಂದುಕ ಎಲ್ಲಿ ಕಾಣಲಲ್ಲ. ಎಲ್ಲಿದೆ ಈ ಜೀನನ ದುಡ್ಡು?

ಠಕಸೇನ ಅತ್ತಿತ್ತ ನೋಡಲಿಕ್ಕೆ ಹತ್ತಿದ. ಮಗ್ಗದ ಹತ್ತಿರ ಹೋದ. ಅಲ್ಲಿ ಮಣ್ಣು ಅಗದದ್ದು ಕಾಣುತ್ತಿತ್ತು. ಸ್ವಲ್ಪ ಮಣ್ಣು ತೆಗೆದಮೇಲೆ ಎರಡು ಚರ್ಮದ ಚೀಲ ಸಿಕ್ಕವು. ಠಕಸೇನ ಹೊರಗೆ ತೆಗೆದ. ಚೀಲ ಒಜ್ಜೆ ಇದ್ದವು. ಇದೇ ಈ ಜೀನನ ದುಡ್ಡು. ಮತ್ತೆ ಮಣ್ಣು ಸರಿ ಮಾಡಿ ಕತ್ತಲಲ್ಲಿ ಹೊರಬಿದ್ದ.

ಹೊರಗೆ ಬಿರುಗಾಳಿ ಭರ್ರನೆ ಬೀಸುತ್ತಿತ್ತು. ಗುಡುಗು, ಮಿಂಚೂ ಇತ್ತು. ದೊಡ್ಡ ಆಣೆಕಲ್ಲು ಬೀಳುತ್ತಿದ್ದವು. ಇಂಥ ಮಳೆ ಎಂದೂ ಬಂದಿದ್ದಿಲ್ಲ. ಮಾನಪ್ಪ ಹೊರಗೆ ಹೋಗಿದ್ದ. ನೂಲು ತರಲಿಕ್ಕೆ ಹೋಗಿದ್ದ. ಮರುದಿನ ಹೊಸ ಸೀರೆ ನೇಯುವದಿತ್ತು. ಮಳೆ ಬರುತ್ತಿದ್ದರಿಂದ ಅವನಿಗೆ ತಡವಾಗಿತ್ತು. ಅಂಗಡಿಯಲ್ಲಿ ನಿಲ್ಲಬೇಕಾಯಿತು. ಬೇಗ ಬರುವೆನೆಂದು ತಿಳಿದು ಅವನು ಮನೆಗೆ ಚಿಲಕ ಹಾಕದೆ ಹೋಗಿದ್ದ. ಅವನ ಮನೆ ಎಂದರೆ ಎಲ್ಲರಿಗೂ ಅಂಜಿಕೆ. ಯಾರೂ ಅವನ ಗೊಡವೆಗೆ ಹೋಗುತ್ತಿದ್ದಿಲ್ಲ. ತನ್ನ ಮನೆಗೆ ಕಳ್ಳರು ಬರುವರೆಂಬ ಮಾತು ಸಹ ಅವನ ಮನಸ್ಸಿನಲ್ಲಿರಲಿಲ್ಲ ಬಿರು ಗಾಳಿ ನಿಂತಿತು. ಮಳೆಯ ಭರವು ಕಡಿಮೆಯಾಯಿತು. ಜಿಟಿ ಜಿಟಿ ಮಳೆ ಇತ್ತು. ಮಾನಪ್ಪ ಹಾಗೆ ಹೊರಟ. ಮಳೆಯಲ್ಲಿ ತೊಯ್ಸಿಕೊಂಡು ಬಂದ. ಮನೆಗೆ ಬಂದು ಅರಿವೆ ಬದಲು ಮಾಡಿ ಒಲೆಯ ಹತ್ತರ ಕೂತನು. ಸ್ವಲ್ಪ ಹೊತ್ತಾದ ಮೇಲೆ ಊಟ ಮಾಡಿದ. ಗುಡಿಸಲದ ಬಾಗಿಲ ಮತ್ತು ಕಿಟಕಿ ಮುಚ್ಚಿದ. ಮಿಣಿ ಮಿಣಿ ದೀಪ ಇತ್ತು. ದುಡ್ಡಿಟ್ಟ ಸ್ಥಳಕ್ಕೆ ಹೋದ.

ಮಾನಪ್ಪ ಮಣ್ಣು ತೆಗೆದ. ಆದರೆ ! ಬಂಗಾರ ನಾಣ್ಯಗಳಿಂದ ತುಂಬಿದ ಚರ್ಮದ ಚೀಲಗಳೆಲ್ಲಿ ? ಅವು ಇದ್ದಿಲ್ಲ. ಅವನು ಗಾಬರಿಗೊಂಡು. ಎಲ್ಲಕಡೆ ನೋಡಿದ. ಮೂಲೆ ಮೂಲೆಗಳಲ್ಲಿ ನೋಡಿದ. ಆದರೆ ಎಲ್ಲಿಯೂ ಬಂಗಾರ ಸಿಗಲಿಲ್ಲ. ಹದಿನೈದು ವರುಷ ಪ್ರೀತಿಯಿಂದ ಗಳಿಸಿದ ಬಂಗಾರ. ಹೊರಗಿನ ಚಳಿಯಿಂದ ಮಾನಪ್ಪನಿಗೆ ತ್ರಾಸವಾಗಲಿಲ್ಲ. ಆದರೆ ದುಡ್ಡಿನ ಕಾವು ಹೋದ ಕೂಡಲೆ ಅವನು ನಡುಗಹತ್ತಿದನು. ತನ್ನ ಪ್ರಾಣ ಹೋಗು ವದೆಂದು ಅವನಿಗೆ ಅನಿಸಿತು. ಎದೆಯನ್ನು ಗಟ್ಟಿಹಿಡಿದನು. ಎದೆ ಒಡೆ ಯುವದೆಂದು ಅನಿಸಿತು. ನಡುನಡುವೆ ಕಣ್ಣು ತೆರೆ ತೆರೆದು ನೋಡುವನು. ನನ್ನ ಬಂಗಾರ, ನನ್ನ ಬಂಗಾರ ಅಂದು ಬಿಕ್ಕಿ ಬಿಕ್ಕಿ ಅಳುವನು.

ಈಗ ಮಳೆ ನಿಂತಿತು. ಆದರೆ ನೇಕಾರ ಮಾನಪ್ಪನ ಕಣ್ಣೊಳಗಿನ ಕಣ್ಣೀರಿನ ಮಳೆ ನಿಂತಿದ್ದಿಲ್ಲ. ಆಕಾಶ ನಿರ್ಮಲವಾಗಿತ್ತು. ಆದರೆ ಮಾನಪ್ಪನ ಹೃದಯದಲ್ಲಿ ಕತ್ತಲೆ ಕವಿದಿತ್ತು. ಅವನಿಗೆ ಹುಚ್ಚು ಹಿಡಿದಂತಾಯಿತು. 'ಬಂಗಾರ ನನ್ನ ಬಂಗಾರ' ಅನ್ನುತ್ತ ಅವನು ಗುಡಿಸಲಬಿಟ್ಟು ಹೊರಬಿದ್ದ. ದಿಗಂಬರರಾಯರ ಕಡೆಗೆ ಹೋಗಬೇಕು, ನ್ಯಾಯ ಸಿಗುವದೇನು ನೋಡಬೇಕು ಎಂದು ಅನಿಸಿತು. ಅಳುತ್ತ ಅವರಲ್ಲಿ ಹೋದ. ಅವರು ಮನೆಯಲ್ಲಿರಲಿಲ್ಲ. ಅವರು ನೆರೆಯ ಊರಿಗೆ ಊಟಕ್ಕೆ ಹೋಗಿದ್ದರು. ಮನೆಯಲ್ಲಿ ಆಳು ಮಕ್ಕಳು ಅವರ ಕಾರಭಾರಿ ಇದ್ದರು. ಅವರೆಲ್ಲ ಹರಟೆ ಹೊಡೆಯುತ್ತ ಕೂತಿದ್ದರು.

ಅಷ್ಟರಲ್ಲಿ "ನನ್ನ ಬಂಗಾರ ಹೋಯಿತು. ನನ್ನ ಪ್ರಾಣ ಹೋಯಿತು. ನನ್ನ ಬಂಗಾರ ಹುಡುಕಿಕೊಡಿರಿ. ಎಲ್ಲಿ ಹೋಯಿತು ನನ್ನ ಬಂಗಾರ? ಯಾರು ಒಯ್ದರು ಅದನ್ನು?" ಹೀಗೆ ಒದರಿದ್ದು ಕೇಳಿಸಿತು. ಅವನು ಮಾನಪ್ಪ ಇದ್ದ. ವಾಡೆದಲ್ಲಿಯ ಜನ ಎಲ್ಲ ಕೂಡಿತು. ಅವರಿಗೆ ಮೊದಲು ಅವನುಏನು ಅನ್ನುತ್ತಾನೆ ಅದೇ ತಿಳಿಯಲಿಲ್ಲ. ಎಲ್ಲಗೊ ಗೊಂದಲವೂ

"ಏ ಮಾನಪ್ಪ, ನೀ ಅನ್ನೊದು ನೆಟ್ಟಗೆಹೇಳು." ಅವರಲ್ಲಿಒಬ್ಬನುಅಂದನು

"ಏನು ಹೇಳಲಿ? ನಾನು ನೂಲು ತರಲಿಕ್ಕೆ ಪೇಟೆಗೆ ಹೋಗಿದ್ದೆ. ಮಳೆ ಬಂತು ಎಂದು ಅಲ್ಲೆ ನಿಂತೆ. ಮಳೆ ಕಡಿಮೆ ಆದ ಮೇಲೆ ಮನೆಗೆ ಹೋದೆ. ಎರಡು ಚರ್ಮದ ಚೀಲದಲ್ಲಿ ಬಂಗಾರದ ನಾಣ್ಯ ಇಟ್ಟು ಮಗ್ಗದ ಕೆಳಗೆ ಹುಗಿದಿಟ್ಟಿದ್ದೆ. ಅಲ್ಲೆ ಹೋದಮೇಲೆ ಆವನ್ನು ನೋಡಿದೆ. ಅವು ಇದ್ದಿಲ್ಲ. ಎರಡುನೂರಾ ಎಪ್ಪತ್ತೆರಡು ಇದ್ದವು. ಕೆಲವು ದಿನಗಳಲ್ಲಿ ಮುನ್ನೂರು ಆಗುತಿದ್ದವು. ಈ ಕೈಯಿಂದ ನೂರಾರು ಸಾರೆ ಎಣಿಸೇನಿ. ಎಲ್ಲಿ ಇದ್ದರೂ ನಾನು ಅವನ್ನು ಗುರುತಿಸುವೆನು. ನೀವೆಲ್ಲ ಸಹಾಯ ಮಾಡಿರಿ. ಹುಡುಕರಿ. ಎಲ್ಲಿ ಹೋದ ಆ ಕಳ್ಳ? ನನ್ನ ಆನಂದ ಹೋಯಿತು. ನನ್ನ ಶಕ್ತಿ ಹೋಯಿತು. ಈಗ ನಡೆಯುವದೂ ಆಗುವದಿಲ್ಲ. ಆ ನನ್ನ ಚೀಲ ತಗೊಂಡು ಬರ್ರಿ."

ಹೀಗಂದು ಮುದುಕ ನೇಕಾರ ನೆಲಕ್ಕೆ ಬಿದ್ದ. ಎಲ್ಲರಿಗೂ ಕನಿಕರವೆನಿಸಿತು. ಎಂದೂ ಅವನು ಸಿಹಿ ತಿನಲಿಲ್ಲ. ಚಲೊ ಅರಿವೆ ಹಾಕಲಿಲ್ಲ.

ಚೈನಿ ಮಾಡಲಿಲ್ಲ. ಹಗಲೆಲ್ಲ ದುಡೀತಿದ್ದ. ದುಡಿದು ಗಳಿಸಿದ ದುಡ್ಡು. ಬೆವರಿನ ಮಳೆಸುರಿದು ಗಳಿಸಿದ ಬಂಗಾರ. ಆದರೆ ಎಲ್ಲ ಹೋಯಿತು. ಆ ದುಡ್ಡಿನ ಉಪಯೋಗ ಅವನಿಗಿತ್ತೇ? ಆದರೆ ಅವು ಹತ್ತಿರ ಇರುವದರಿಂದ ಅವನಿಗೆ ಕಾವು ಇತ್ತು. ಅದರ ಸ್ಪರ್ಶ, ದರ್ಶನಗಳಲ್ಲಿ ಅವನಿಗೆ ಆನಂದ ವಿತ್ತು. ಆದುಡ್ಡಿನಲ್ಲಿ ಎರಡನೆ ಉದ್ದೇಶ, ಪ್ರಯೋಜನ ಏನೂ ಇದ್ದಿಲ್ಲ ಅವು ಮಾನಪ್ಪನ ಪ್ರೀತಿಯ ಸ್ಥಾನವಾಗಿದ್ದವು.

"ನಿಮಗೆ ಯಾರ ಮೇಲೆ ಸಂಶಯುವಿದೆ" ಒಬ್ಬರು ಕೇಳಿದರು.

"ಇಲ್ಲಿದ್ದ ನಿಮ್ಮ ಸೌಕರನಾದ ಭೀಮಪ್ಪನ ಮೇಲೆ ಸಂಶಯುವಿದೆ. ಹಿಂದಕ್ಕೊಮ್ಮೆ ನಿಮ್ಮ ದುಡ್ಡು ಕಳವುಮಾಡಬೇಕು ಎಂದು ಅಂದಿದ್ದ, ಅವನಿಗೆ ಕೇಳಿರಿ." ಮಾನಪ್ಪ ಅಂದ

ಭೀಮಪ್ಪ ಸಿಟ್ಟು ಬೆಂಕಿ ಆದಾ.

"ಕಪಾಳಗಡ್ಡಿ ಒಡೆದೇನು ಮುದುಕಾ! ನಾನು ನಿನ್ನ ದುಡ್ಡು ಕಳವು ಮಾಡೇನ? ಸಂಜೆಯಿಂದ ಇಲ್ಲೆ ಇದ್ದೇನಿ. ನಿನ್ನ ದುಡ್ಡು ಈಗ ಹೋತು ಅಂತಾ ಹೇಳೀದಿ. ಚೇಷ್ಟೆಯಲ್ಲಿ ಅಂದ ಮಾತಿಗೆ, ನನ್ನ ಮೇಲೆ ಸಂಶಯು ತಗೋತಿ?" ಭೀಮಪ್ಪ ಸಿಟ್ಟಿಗೆದ್ದು ಅಂದ.

"ಮಾನಪ್ಪ ಹೀಂಗ ಸುಮ್ಮನ ಯಾರದಾರ ಹೆಸರು ತಗೊಬ್ಯಾಡ. ಭೀಮಪ್ಪ, ಪ್ರಾಮಾಣಿಕ ಮನಷ್ಯಾ. ಈ ವಾಡೆದಾಗ ಇಪ್ಪತ್ತು ವರುಷ ಕೆಲಸ ಮಾಡತಾನ. ಆದರ ಒಂದು ಕಡ್ಡಿಗೆ ಕೈ ಹಚ್ಚಿಲ್ಲ." ಕಾರಭಾರಿ ಅಂದ.

"ಭೀಮಪ್ಪ, ಕ್ಷಮಿಸು. ಆದರೆ ನನ್ನ ಬಂಗಾರ! ಯಾರ ಒಯ್ದರು ನನ್ನ ಬಂಗಾರ! ಹುಡುಕರಿ. ಹದಿನೈದು ವರುಷ ದುಡಿದು ಗಳಿಸಿದ್ದು. ಅಯ್ಯಯ್ಯೋ! ಈಗ ಹೇಗೆ ಬದುಕಲಿ? ಹುಡುಕರಿ." ಎಂದು ಕಳಕಳಿಯಿಂದ ಬಿನ್ನವಿಸಿದ.

ಕೆಲವರು ದೀಪ ತಗೊಂಡು ಹೊರಟರು. ಕೆಲವರು ಕಟಿಗಿ ತಗೊಂಡು ಹೊರಟರು. ಕೆಲವರು ಇತ್ತಕಡೆ, ಕೆಲವರು ಅತ್ತಕಡೆ. ಆದರೆ ಕಳ್ಳ ಸಿಗಲಿಲ್ಲ. ಜನರೆಲ್ಲ ಮಲಗಿದ್ದರು. ಹುಡುಕಲಿಕ್ಕೆ ಹೋದವರು ತಿರುಗಿಬಂದರು.

"ಸಿಕ್ಕಿತೇ ನನ್ನ ಬಂಗಾರ?" ಮಾನಪ್ಪ ಕೇಳಿದ.

"ಎಲ್ಲಾಕಡೆ ನೋಡಿದೆವು. ಆದರೆ ಕಳ್ಳ ಸಿಗಲಿಲ್ಲ. ಎಲ್ಲಿ ನೋಡಿದರೂ

ಕೆಸರೇ ಇದೆ. ಹಳ್ಳ ಬಂದಾವ. ಆದದ್ದಾಯಿತು. ನಿನ್ನದೆ ಇದ್ದರೆ ತಿರುಗಿ ಸಿಗುವದು ಮಾನಪ್ಪ" ಎಂದು ಕಾರಭಾರಿ ಅಂದ.

"ನನ್ನದೆ ಇತ್ತು. ನನ್ನ ದುಡಿಮೆಯದಿತ್ತು. ನಾನು ವಿಶ್ರಾಂತಿ ಸಹ ತೆಗದುಕೊಳ್ಳದೇ ದುಡಿದಿದ್ದೆ" ಮಾನಪ್ಪ ಅಂದ.

"ಈಗ ಮನೆಗೆ ಹೋಗು. ಚಿಂತೆ ಮಾಡಿ ಏನು ಪ್ರಯೋಜನ ?" ಕಾರಭಾರಿ ಅಂದ.

ಮಾನಪ್ಪ ಮನೆಗೆ ಹೋದ. ಕಣ್ಣು ತೆರೆತೆರೆದು ನೋಡಿದ. ಸಾವಕಾಶ ಕಣ್ಣು ಮುಚ್ಚಿದವು. ಬೆಳಗಿನ ಝಾವದಲ್ಲಿ ನಿದ್ದೆ ಹತ್ತಿತು. ಮುಂಜಾನೆ ಊರಲ್ಲೆಲ್ಲ ಕಳವಿನ ಸುದ್ದಿಯೇ ಸುದ್ದಿ. ಊರವರೆಲ್ಲ ಮಾನಪ್ಪನ ಗುಡಿಸಲ ಮುಂದೆ ಬಂದಿದ್ದರು. ಎಲ್ಲರಿಗೂ ಅವನ ವಿಷಯ ಸಹಾನುಭೂತಿ. ಮಾನಪ್ಪ ದುಃಖಿಸುತ್ತ ಕೂತಿದ್ದ. ಮುಖದ ಮೇಲೆ ಹೆಣದ ಕಳೆ ಬಂದಿತ್ತು. ಒಂದು ಶಬ್ದ ಸಹ ಮಾತಾಡಲು ಬರತಿದ್ದಿಲ್ಲ.

ಮಾನಪ್ಪನ ಗುಡಿಸಲ ಹತ್ತರ ಸಖಾರಾಮ ಎಂಬುವವನ ಗುಡಿಸಲು ಇತ್ತು. ಅವನ ಹೆಂಡತಿಯ ಹೆಸರು ಸಾಳವ್ವ ಬಹಳ ಚಲೊ ಹೆಣ್ಣು ಮಗಳು. ಅವಳಿಗೆ ಎರಡನೆಯವರ ದುಃಖದ ಅರಿವು ಬಹಳ. ಅವಳಿಗೆ ಒಬ್ಬ ಮಗ ಇದ್ದ. ಐದಾರು ವರುಷದವನಿದ್ದ. ತಾಯಿತಂದೆ ಹುಡುಗನ ಮೇಲೆ ಜೀವ. ಕಾಣಲಿಕ್ಕೂ ಚಲೊ. ಅವನ ಹೆಸರು ರಾಮೂ.

ಸಾಳವ್ವ ರಾಮೂನನ್ನು ಕರಕೊಂಡು ಮಾನಪ್ಪನ ಮನೆಗೆ ಹೋದಳು. ಆಗ ಜನರ ಗದ್ದಲ ಕಡಿಮೆಯಾಗಿತ್ತು. ಜನ ತಮ್ಮ ತಮ್ಮ ಉದ್ಯೋಗಕ್ಕೆ ಹೋದರು. ಮಾನಪ್ಪ ಖಿನ್ನನಾಗಿ ಒಂದು ಹಳೇ ಆರಾಮಖುರ್ಚಿಯ ಮೇಲೆ ಕೂತಿದ್ದ.

"ಬಹಳ ಕೆಟ್ಟಾಯಿತು. ದುಡಿದ ದುಡ್ಡು. ಮನಸಿಗೆ ಹಚ್ಚಿಕೊಳ್ಳ ಬೇಡಿರಿ, ಮಾನಪ್ಪ. ಚಿಂತಿಸಿ ಏನು ಉಪಯೋಗ ? ನೀವು ದುಡ್ಡಿನ ಬೆನ್ನು ಹತ್ತೋದು ಬಹಳ ದೇವರಿಲ್ಲ, ಗುಡಿಇಲ್ಲ, ಏಕಾದಶಿ ಇಲ್ಲ, ಸೋಮ ವಾರ ಇಲ್ಲ. ದಿನಾ ಬರೀ ಕೆಲಸ, ಕೆಲಸ ! ಮಾನಪ್ಪ, ಕೆಲಸ ಮಾಡಬೇಕು, ಆದರೆ ದೇವರನ್ನು ಮರೆಯಬಾರದು. ಇನ್ನಾರ ದೇವರನ್ನು ಮರೆಯಬೇಡಿರಿ ಯಾವಾಗಾರ ಭಜನಿ ಕೇಳಲಿಕ್ಕೆ ಹೋಗರಿ. ನಿಮಗೆ ಭಜನಿ ಅನಲಿಕ್ಕಾರ

ಬರತಾವೇನು ? ನಮ್ಮ ರಾಮೂ ಎಷ್ಟು ಚಲೋ ಅಂತಾನ. ರಾಮೂ ಒಂದು ಭಜನಿ ಅನ್ನು. ನಗತೀ ಏನೋ ? ಮಾನಪ್ಪಗ ಅಂದ ತೋರಿಸಲ್ಲ ? ” ಸಾಳವ್ವ ಅಂದಳು.

ರಾಮೂ ನಾಚಿದಾ ಎರಡೂ ಕೈಲೆ ಕಣ್ಣು ಮುಚ್ಚಿಕೊಂಡ. ಮತ್ತ ಕೈ ತೆಗೆದ. ತಾಯೀ ಹಿಂದ ಅಡಗಿದ.

“ ಅನ್ನಲ್ಲ ನಾಚತಿ ಏನು ? ” ಸಾಳವ್ವ ಅಂದಳು.

ರಾಮೂ ಭಜನಿ ಪದ ಹೇಳಿದ.

ಕಳೆಯಬೇಡಿ, ಕಳೆಯಬೇಡಿ ನಿಮ್ಮ ಆಯುಷ್ಯ,<br>
ಇದೇ, ಇದೇ ನನ್ನ ಉಪದೇಶ ಉಪದೇಶ.<br>
ನಿಮ್ಮ ನಿಮ್ಮ ಮನಸನು ಶುದ್ಧಗೊಳಿಸಿರಿ,<br>
ನಿಮಗೆಲ್ಲ, ನಿಮಗೆಲ್ಲ ನನ್ನ ನಮಸ್ಕಾರ.<br>
ಮನವೆಲ್ಲ ಒಂದೆಡೆ ತಂದು, ದೇವರ ಚಿಂತನ<br>
ಮಾಡಿರಿ, ಮಾಡಿರಿ, ಮಾಡಿರಿ.<br>
ಹಿತವಿದ್ದ ಮಾತನ್ನೆಲ್ಲ ಮಾಡಿರಿ,<br>
ಮಾಡಿರಿ. ಮತ್ತೇನು ಹೇಳಲಿ, ನಿಮಗೆ ?

ಮಗುವಿನ ದನಿ ಸೊಗಸಾಗಿತ್ತು. ನಿರ್ಮಲವಾತ್ತು. ಪದ ಹೇಳಿದ ಮೇಲೆ ರಾಮೂ ತನ್ನ ತಾಯಿಯ ಕೊರಳಲ್ಲಿ ಬಿದ್ದ. ಅವಳೂ ಅವನಿಗೆ ಮುದ್ದಿಟ್ಟಳು.

“ ನಾನೂ, ನನ್ನ ಬಂಗಾರ ನಾಣ್ಯ ಹೀಗೆ ಮುದ್ದಿಸುತ್ತಿದ್ದೆ. ಅವೇ ನನ್ನ ಮಕ್ಕಳಾಗಿದ್ದವು. ನಾನು ಅವನನ್ನು ಅಪ್ಪಿಕೊಳ್ಳುತ್ತಿದ್ದೆ. ಈಗ್ಯಾರನ್ನು ಮುದ್ದಿಸಲಿ, ಅಪ್ಪಿಕೊಳ್ಳಲಿ ? ” ಮಾನಪ್ಪ ಅಂದ.

“ನಮ್ಮ ರಾಮೂನನ್ನು ಮುದ್ದಿಸಿರಿ, ಅಪ್ಪಿಕೊಳ್ಳರಿ ” ಸಾಳವ್ವ ಅಂದಳು.

“ ರಾಮೂನನ್ನು ? ” ಎಂದು ಆಶ್ಚರ್ಯದಿಂದ ಮಾನಪ್ಪ ಕೇಳಿದನು.

“ ಹೌದು, ರಾಮೂ ನಮ್ಮ ಬಂಗಾರ. ನಾವು ದಿನ ದುಡಿಯುತ್ತೇವೆ. ಆದರೆ ಯಾರಿಗಾಗಿ ?

ಈ ರಾಮೂನಿಗಾಗಿ. ನಮ್ಮ ದುಡ್ಡು ಅವನಿಗಾಗಿ. ಇವನೇ ನಮ್ಮ ಆಸ್ತಿ. ಆಡುವ, ಹಾಡುವ, ನಗುವ ಆಸ್ತಿ. " ಹೀಗಂದು ಸಾಳವ್ವ ರಾಮೂನನ್ನು ಅಪ್ಪಿಕೊಂಡಳು. ಕೆಲವು ಹೊತ್ತು ಯಾರೂ ಮಾತಾಡಲಿಲ್ಲ.

" ಮಾನಪ್ಪ, ಇವತ್ತ ನೀವು ನಮ್ಮ ಕಡೆಗೆ ಊಟಕ್ಕೆ ಬರ್ರಿ. ಮನ್ಯಾಗ ಮಾಡಬೇಡಿರಿ. ಈಗ ನಾನು ಸ್ವಲ್ಪ ತಾಲಿಪಿಟ್ಟು ತಂದೇನಿ, ಅದನ್ನ ತಿನ್ನಿರಿ. ಇವತ್ತು ಮನೆ ಯಜಮಾನ ' ತಾಲಿಪಿಟ್ಟು ಮಾಡು ' ಅಂದಾ. ಮಾಡಿದ್ದೆ. ಗಂಡಸರಿಗೆ ತಿನಲಿಕ್ಕೆ ಬೇರೆ ಬೇರೆ ಪದಾರ್ಥ ಬೇಕಾಗತಾವ. ನಮಗೆ ಹೆಣ್ಣಮಕ್ಕಳಿಗೆ ಬೇಕಾದಿದ್ದರೂ ನಡೀತದ. ಬೇಡ, ಅನ್ನಬೇಡಿರಿ, ತಿನ್ನರಿ. ನೀವು ಬಹಳ ದಿವಸದಾಗ ತಾಲಿಪಿಟ್ಟ ತಿಂದಿರಲಿಕ್ಕಿಲ್ಲ. " ಸಾಳವ್ವ ಅಂದಳು ಮುದುಕನಿಗೆ ತಾಲಿಪಿಟ್ಟ ಕೊಟ್ಟಳು. ಮಾನಪ್ಪ ನೋಡಕೋತ ಕೂತ. ಒಂದು ತುಂಡು ಮುರಿದು ರಾಮೂನಿಗೆ ಕೊಟ್ಟ.

" ಅವಗ ಯಾಕ ಕೊಡತೀರಿ ? ಅವ ಎಲ್ಲಾನು ತಿಂದಾನು. ಪಕ್ಕಾ ಬೆರ್ಕಿ ಇದ್ದಾನ. ನೀವ ತಿನ್ನರಿ. ಈಗ ಹೋಗತೇನಿ ನಾನು. ಮಾನಪ್ಪ ಬಹಳ ಕೆಲಸಮಾಡಬೇಡಿರಿ. ನಕ್ಕೋತ ಮಾತಾಡರಿ ದೇವರ ದರ್ಶನಕ್ಕೆ ಹೋಗರಿ. ಭಜನಿ ಮಾಡರಿ. ''ಎಂದು ಅಂದು ಸಾಳವ್ವ ಮನೆಗೆ ಹೋದಳು. ಮಾನಪ್ಪ ಖುರ್ಚಿಯಲ್ಲಿ ಕೂತಿದ್ದ. ಊರೊಳಗಿನ ಎಷ್ಟೋ ಜನ ಬಂದು ಹೋದರು. ಆದರೆ ಸಾಳವ್ವನ ಮಾತು ಎಷ್ಟು ಸರಳ, ಎಂಥ ಸಹಾನುಭೂತಿ! ಅವನ ಮನಸಿನ ಮೇಲೆ ಆ ಮಾತಿನ ಪರಿಣಾಮವಾಯಿತು; ಅವನ ಕಣ್ಣೊಳಗಿಂದ ನೀರು ಬರುತ್ತಿದ್ದವು. ಆದರೆ ಅವನು ತಡೆಹಿಡಿದನು. ಹದಿನೈದು ವರುಷದಲ್ಲಿ ಅವನ ಕಣ್ಣಲ್ಲಿ ನೀರು ಬಂದಿದ್ದಿಲ್ಲ; ಅವನ ಹೃದಯದ ಭಾವನೆಗೆ ಏತರ ಸ್ಪರ್ಶವೂ ಆಗಿದ್ದಿಲ್ಲ. ಅವನಿಗೆ ತನ್ನ ಹೃದಯದ ಅರಿವೇ ಇದ್ದಿಲ್ಲ. ಆದರೆ ಇಂದು ಅವನ ಹೃದಯ ಜಾಗೃತವಾಯಿತು. ಅವನಿಗೆ ಅಭಂಗಗಳು ನೆನಪಾಗಹತ್ತಿದವು. ತಾನು ಒಂದು ದಿನ ದೇವರ ಗುಡಿಗೆ ಹೋಗಿದ್ದೆ ಎಂಬುದರ ನೆನಪಾಯಿತು. ಮುಚ್ಚಿದ ಹೃದಯದ ಬಾಗಿಲು ಸ್ವಲ್ಪ ತೆರೆಯಿತು. ಬಾಗಿಲಿಗೆ ಜಂಗು ಹತ್ತಿತ್ತು. ಆದರೆ ಸಾಳವ್ವನ ಮೃದು ಮಾತಿನ ಸ್ನೇಹದಿಂದ ಆ ಜಂಗು ಹೋಯಿತು. ಬಾಗಿಲ ತೆರೆಯಿತು. ಪ್ರಕಾಶವು ಒಳಗೆ ಸೇರಿತು.

---

# ಪ್ರಕರಣ ೪

## ಬಂಗಾರ ತಿರುಗಿ ಬಂತು

ಮಾನಪ್ಪನು ಮತ್ತೆ ಹುರುಪಿನಿಂದ ಕೆಲಸ ಮಾಡಹತ್ತಿದನು. ಕೆಲಸ ಮಾಡುವಾಗ ಕಳಕೊಂಡ ಬಂಗಾರದ ನೆನಪು ಬಂದು ಕೈ ನಿಲ್ಲುತ್ತಿತ್ತು. ಆದರೆ ಮತ್ತೆ ಹುರುಪು ಬಂದು, ಕೆಲಸ ಮುಂದರಿಯುತ್ತಿತ್ತು. ಹೋದರೆ ಹೋದವು ಬಂಗಾರದ ನಾಣ್ಯ. ಹಗಲು ರಾತ್ರಿ ದುಡಿದರೆ ಮತ್ತೆ ದೊರೆಯುವವು. ಮತ್ತೆ ಎಣಿಸುತ್ತ ಕೂಡುವೆ, ಕೈಯಲ್ಲಿ ಆಡಿಸುವೆ, ಎದೆಗೆ ಅಪ್ಪಿಕೊಳ್ಳುವೆನೆಂದು ಅನ್ನುತ್ತಿದ್ದ. ನಡುನಡುವೆ ನಿರಾಶೆಯ ನಿಟ್ಟುಸಿರು ಬಿಡುವನು. ಆದರೆ ಮತ್ತೆ ನಿಶ್ಚಯದಿಂದ ಕೆಲಸಕ್ಕೆ ಪ್ರಾರಂಭಿಸುವನು. ಈಗ ನಿದ್ದೆ ಕಡಿಮೆ ಮಾಡಿದ. ಮೊದಲೇ ಅವನಿಗೆ ನಿದ್ದೆ ಕಡಿಮೆ ಯಾವಾಗಲೂ ಅವನಿಗೆ ಕಳಕೊಂಡ ಬಂಗಾರವು ಕಾಣುತ್ತಿತ್ತು. ಕನಸಿನಲ್ಲಿ ಮನಸಿನಲ್ಲಿ ಬಂಗಾರ. ರಾತ್ರಿ ಸಹ ನೇಯುತ್ತಿದ್ದ. ಖಟಕ್ ಖಟಕ್ ಎಂಬ ದನಿ ಯಾವಾಗಲೂ ಕೇಳಬರುತ್ತಿತ್ತು. ಒಮ್ಮೊಮ್ಮೆ ಎಳೆ ಹರಿದರೆ ಕಷ್ಟವಾಗುತ್ತಿತ್ತು. ಆದರೆ ಹಾಗೆ ಕಷ್ಟಪಟ್ಟು ಹುಡುಕಿ ಮುಂದೆ ಕೆಲಸ ಸಾಗಿಸುತ್ತಿದ್ದ. ಬಂಗಾರದ ಭೆಟ್ಟಿಯಾಗಬೇಕೆಂದು ನಡೆದಿತ್ತು ಈ ತಪಶ್ಚರ್ಯೆ. ಕಾಳಪುರುಷನು ಜೀವನದ ವಸ್ತ್ರವನ್ನು ಹಗಲಿರುಳು ನೇಯುವಂತೆ ಮಾನಪ್ಪನ ಮಗ್ಗ ನಡೆದಿತ್ತು.

ಹೀಗೆ ಮಾಡತಾ ಮಾಡತಾ ದೀಪಾವಳಿ ಬಂದಿತು. ಊರಲೆಲ್ಲ ಆನಂದ ಸೂರೆಯಾಗಿತ್ತು. ಕರಜಿಕಾಯಿ ಉಂಡಿ ಮುಂತಾದವು ನಡೆದಿದ್ದವು. ಮನೆಯ ಮುಂದೆ ರಂಗವಲ್ಲಿ ಹಾಕುತ್ತಿದ್ದರು. ರಾತ್ರಿ ಸಾವಿರಾರು ದೀಪ ಹಚ್ಚುತ್ತಿದ್ದರು. ಬಹಳ ಮೋಜು ಕಾಣುತ್ತಿತ್ತು. ಆ ಸಾವಿರಾರು ದೀಪ ನೋಡಿ ಮನಸ್ಸಿಗೆ ಆನಂದವಾಗುತ್ತಿತ್ತು.

“ಮಾನಪ್ಪ, ಈ ದೀಪಾವಳಿಗೆ ನಾಲ್ಕು ದೀಪಹಚ್ಚಿರಿ ಇಷ್ಟು ವರುಷ ಮಾಡಿಲ್ಲ. ಇವತ್ತರ ಹಚ್ಚರಿ. ಮತ್ತು ನಾಳೆ ಲಕ್ಷ್ಮೀ ಪೂಜನ.

ನಿಮ್ಮ ಕಳಕೊಂಡ ಬಂಗಾರ ಸಿಕ್ಕರೂ ಸಿಗಬಹುದು. ತಾನಾಗಿ ಹೋಯಿತು. ತಾನಾಗಿ ಬರಬಹುದು. ಹೀಂಗ ಒಮ್ಮೊಮ್ಮೆ ಆಗತದ. ಆದರೆ ಬರೀ ಬಂಗಾರದ ಹುಚ್ಚುಬೇಡ. ಈ ಮಾತು ನಿಮಗೆ ಕಲಿಸುವದು ದೇವರ ಮನಸ್ಸಿನಲ್ಲಿದ್ದಂತೆ ತೋರುತ್ತದೆ. ಬಂಗಾರಕ್ಕಿಂತ ಎಷ್ಟೋ ಸುಂದರ ವಸ್ತುಗಳು ಈ ಜಗತ್ತಿನಲ್ಲಿವೆ. ಬರೀ ಬಂಗಾರ ಕೂಡಿಸಿ ಏನು ಮಾಡುವದದೆ ? ಅದು ಯಾರಿಗಾದರೂ ಉಪಯೋಗವಾದರೆ ಯೋಗ್ಯ. ಇಲ್ಲದಿದ್ದರೆ ಕಲ್ಲೇನು, ಬಂಗಾರೇನು ? ಬೆಲೆ ಅಷ್ಟೇ. ಹೊರಗೆ ಆ ಮಣ್ಣು ಬಿದ್ದಾಂಗ, ಒಳಗಿನ ನಿಮ್ಮ ಆ ಹೊನ್ನು. ದೇವರು ನಿಮಗೆ ಇದನ್ನೇ ಕಲಿಸಬೇಕು ಅಂತಿದ್ದ. ದೇವರು ದಯಾಳು ಇದ್ದಾನೆ. ನಿಮ್ಮ ಬಂಗಾರ ಆಕಸ್ಮಾತ ಬರಬಹುದು. ಅದು ಬರಲಿ, ಬರದಿರಲಿ ನೀವಂತೂ ನಾಳೆ ಲಕ್ಷ್ಮೀ ಪೂಜೆಗಾಗಿ ನಾಲ್ಕು ದೀಪ ಹಚ್ಚರಿ. ದೀಪ ಬಂಗಾರದಂತೆ ಹೊಳೆಯುತ್ತವೆ ನಾನು ಈ ಕರಜಿಕಾಯಿ ಉಂಡಿ ತಂದೇನಿ. ಅವನ್ನು ತಗೊಳ್ಳರಿ. ರಾಮೂಗಾಗಿ ಎಲ್ಲ ಮಾಡಬೇಕಾತದ. ಹಬ್ಬ ಎಲ್ಲರಿಗಾಗಿ ಇರುತ್ತದೆ. ಬಡತನ ಇದ್ದರೂ ಹಬ್ಬ ಮಾಡಬೇಕು. ಸ್ವಲ್ಪ ಸೀ ಮಾಡಿ ತಿನ್ನಬೇಕು ಅಲ್ಲ ಮಾನಪ್ಪ ? " ಸಾಳವ್ವ ಅಂದಳು.

ಅವಳು ಹೋದಳು. ಮರುದಿನ ಮಾನಪ್ಪ ನಾಲ್ಕು ದೀಪ ಹಚ್ಚಿದ. ಪಣತಿ ಹೊಳೆಯ ಹತ್ತಿದವು. ಮಾನಪ್ಪ ತನ್ನ ಗುಡಿಸಲವನ್ನು ಝಳ ಝಳ ಮಾಡಿದನು. "ನನ್ನ ಹೋದ ಲಕ್ಷ್ಮಿ ಇಂದು ಹಿಂತಿರುಗುವಳು. ಹೌದು. ಬರುವಳು ದುಡಿದ ದುಡ್ಡಿತ್ತು ಅದು. ನನ್ನ ಪ್ರೀತಿಯ ದುಡ್ಡು. ನಾನು ಅದನ್ನು ಅಪ್ಪಿಕೊಳ್ಳುವೆ" ಎಂಬ ವಿಚಾರ ಆ ನೇಕಾರನ ತಲೆಯಲ್ಲಿ ಸುಳಿಯುತ್ತಿದ್ದವು.

ಊರಲ್ಲಿ ಲಕ್ಷ್ಮೀ ಪೂಜನದ ಮಹೋತ್ಸವ ನಡೆದಿತ್ತು. ದಿಗಂಬರ ರಾಯರಲ್ಲಿ ಬಲು ದೊಡ್ಡ ಉತ್ಸವ. ಅಂದು ಅವರಲ್ಲಿ ಊರ ಜನರೆಲ್ಲ ಬರುತ್ತಿದ್ದರು. ಸುತ್ತ ಮುತ್ತಲಿನ ಹಳ್ಳಿಯವರು, ಅವರ ರೈತರು ಬರುತ್ತಿದ್ದರು. ದಿವಾಣಖಾನೆಯಲ್ಲಿ ಗಾದಿ ಲೋಡು ಹಾಕಿದ್ದರು. ಎಲ್ಲಕಡೆ ಸಮಯಿಗಳನ್ನು ಹಚ್ಚಿದ್ದರು. ಎಲೆ ಅಡಿಕೆ ತಬಕಗಳಿದ್ದವು. ಮಂಗಲ ವಾದ್ಯಗಳನ್ನು ಬಾರಿಸುತ್ತಿದ್ದರು. ಅತ್ತರ ಗುಲಾಬ ಇದ್ದವು. ಮದ್ದನ್ನು

ಹಾರಿಸುತ್ತಿದ್ದರು. ದಿಗಂಬರರಾಯರು ಪೂಜೆಗೆ ಕುಳಿತಿದ್ದರು. ಆ ಬಿರು ಗಾಳಿಯದಿನ ಹೋದ ಠಕಸೇನ ತಿರುಗಿ ಬಂದಿದ್ದಿಲ್ಲ. ಸತ್ತ ಕುದರೆಯು ಪತ್ತೆ ಹತ್ತಿತ್ತು ಆದರೆ ಠಕಸೇನನ ಪತ್ತೆ ಇದ್ದಿಲ್ಲ ಮನೆಯಲ್ಲಿ ಅವನ ವಿಷಯ ಯಾರಿಗೂ ಅಷ್ಟು ಪ್ರೀತಿಯೂ ಇರಲಿಲ್ಲ ಆದ್ದರಿಂದ ಅವನು ಇಲ್ಲದ್ದು ಯಾರಿಗೂ ಏನೂ ಅನಿಸಲಿಲ್ಲ.

ದಿಗಂಬರರಾಯರಲ್ಲಿ ದಲಪತರಾವ ಮತ್ತು ಅವಳ ಮಗಳಾದ ಇಂದುಮತಿ ಬಂದಿದ್ದರು. ಅವಳು ಸಂಪತರಾಯನನ್ನು ಪ್ರೀತಿಸುತ್ತಿದ್ದಳು. ಅವನಿಗೂ ಆನಂದವೆನಿಸುತ್ತಿತ್ತು. ದಲಪತರಾಯರು ದಿಗಂಬರರಾಯರಿಗೆ ನಮಸ್ಕಾರ ಮಾಡಿ ಅಂದರು “ ಲಕ್ಷ್ಮೀಪೂಜೆಯಾಯಿತು. ಇನ್ನು ಗೃಹ ಲಕ್ಷ್ಮಿಯನ್ನು ಎಂದು ತರುವಿರಿ ? ನಮ್ಮ ಇಂದುಮತಿಯನ್ನು ನಿಮ್ಮ ಸಂಪತರಾಯನಿಗೆ ಕೊಡಬೇಕು ಅನ್ನುತ್ತೇನೆ ಇಬ್ಬರೂ ಒಬ್ಬರಿಗೊಬ್ಬರು ಅನುರೂಪ ಇದ್ದಾರೆ. ನಾವಂತೂ ಮುದುಕರಾದೆವು. ಇದೊಂದು ಮದುವೆ ಮಾಡಿದರೆ ನಮ್ಮ ಕರ್ತವ್ಯ ಮುಗಿದಂತಾಯಿತು. ”

“ ದಲಪತರಾಯರೆ, ನನ್ನದೂ ಅದೇ ಆಶೆ. ಈ ಮಾರ್ಗಶೀರ್ಷದಲ್ಲಿ ಮದುವೆ ಮಾಡೇ ತೀರುವ. ಸಂಪತ ಕೇಳಿದಿಯಾ ? ” ದಿಗಂಬರ ರಾಯರು ಅಂದರು.

“ ಅಪ್ಪಾ, ಹೋಗುವ ನಡೆ ” ಇಂದುಮತಿ ಅಂದಳು

“ ಅಲ್ಲ ಮಗು, ಇನ್ನು ನಿನಗೆ ಇಲ್ಲೇ ಇರುವದದೆ. ಇಲ್ಲೇ ಮನ ಸನ್ನು ರಮಿಸುವದದೆ. ಬೇಗ ಹೋಗುವ ಎಂದೇಕೆ ಅನ್ನುವದು ? ” ದಲಪತರಾಯ ಕೇಳಿದ

“ ಅವಳು ನಾಚುತ್ತಾಳೆ. ನಮ್ಮ ಮಾತಿನಿಂದ ಅವರಿಬ್ಬರಿಗೂ ಆನಂದವಾಗುತ್ತಿದೆ. ಆದರೆ ಮೇಲೆ ಈ ರೀತಿ ತೋರುತ್ತಿದ್ದಾರೆ. ಪ್ರೀತಿಯ ರೀತಿಯೇ ಇದು. ಅದು ಸಾವಕಾಶವಾಗಿ ಅರಳುತ್ತದೆ. ನಾಚುತ್ತ ನಾಚುತ್ತ ಅರಳುತ್ತದೆ. ಪ್ರೀತಿಯ ಕಲಿಕೆ ಅಲ್ಲವೇ ? ” ದಿಗಂಬರರಾಯರು ಅಂದರು

ಊರಲ್ಲೆಲ್ಲ ದೀಪಾವಳಿ ನಡೆದಿತ್ತು. ಲಕ್ಷ್ಮೀ ಪೂಜೆ ಸಾಗಿದೆ ಸಾವಿರಾರು ಪಣತಿ ಉರಿಯುತ್ತಿದ್ದವು. ಆಕಾಶದಲ್ಲಿಯ ಚುಕ್ಕೆಗಳೇ

ನೆಲಕ್ಕೆ ಇಳಿದಂತೆ ಕಾಣುತ್ತಿತ್ತು. ಈ ಆನಂದದ ನಾಲ್ಕುದಿನಗಳಲ್ಲಿ ದುಃಖದಿಂದಿರುವ ಜೀವಗಳು ಏನು ಮಾಡುತ್ತಿದ್ದವು ? ಕೆಲವು ದುಃಖ ಗಳನ್ನು ನಾವು ಎಂದೂ ಮರೆಯುವದಿಲ್ಲ. ಅಂಥ ದುಃಖಗಳು ಇಂಥ ಪ್ರಸಂಗಗಳಲ್ಲಿ ಮತ್ತಿಷ್ಟು ತೀವ್ರವಾಗುತ್ತವೆ

ಇಗೋ ನೋಡಿದಿರಾ ಈ ಅನಾಥ ಮಹಿಳೆಯನ್ನು. ಒಂದು ಚಿಕ್ಕ ಮಗುವನ್ನು ಅಪ್ಪಿಕೊಂಡು ನಡೆದಿದ್ದಾಳೆ. ಮೈಮೇಲೆ ಹರಕ ಸೀರೆ ಅವಳ ಹೃದಯವಿದೀರ್ಣವಾಗಿದೆ. ಕಣ್ಣೀರು ಸುರಿಯುತ್ತವೆ. ಅವಳು ತರು ಣಳೂ ಸುಂದರಳೂ ಇದ್ದಾಳೆ. ಆದರೆ ಮುಖದ ಮೇಲೆ ಕಳೆ ಇಲ್ಲ. ಯಾವನೋ ಪಾಪಿ ಅವಳನ್ನು ಮೋಸಗೊಳಿಸಿದ್ದಾನೆ. ಅವಳು ನಂಬಿದವ ಅವಳಿಗೆ ಮೋಸಮಾಡಿದ್ದಾನೆ. ತನ್ನ ಗಂಡ ಒಂದು ದಿನ ತನ್ನನ್ನು ಮನೆಗೆ ಕರಕೊಂಡು ಹೋಗುವನೆಂದು ಅವಳ ಆಶೆ. ಆದರೆ ಈ ಆಶೆ ಎಷ್ಟು ದಿನ ತಡೆಯುವದು ? ಅವಳಿಗೊಂದು ಸುಂದರವಾದ ಮಗು ಒಂದು ವರ್ಷದ್ದಾದರೂ ಇನ್ನೂ ಗಂಡ ಕರೆದುಕೊಂಡು ಹೋಗವಲ್ಲ. ಬದುಕುವದಾದರೂ ಹೇಗೆ ? ಜನ ಗುಜು ಗುಜು ಮಾಡತಾ ಇದ್ದಾರೆ. ಆ ಟೀಕೆ, ಕುಟೀಲ ಟೀಕೆ ಸಹನವಾಗವಲ್ಲದು. ನಿಷ್ಪಾಪ ಮನಕ್ಕಂತೂ ವೇದನೆ ಬಹಳ.

ಅವಳು ಮಗುವನ್ನು ಕರೆದುಕೊಂಡು ಹೊರಟಳು. ನಡೆಯುತ್ತ ಹೊರಟಿದ್ದಳು. ಕಾಲು ಸೋತವು ಕಾಲಿಗೆ ಹುಣ್ಣಾಗಿದ್ದವು ಅವಳು ಒಂದು ತೀವ್ರಭಾವನೆಯಿಂದ ಹೊರಟಿದ್ದಳು "ಇಂದು ಅವರ ಮನೆ ಯಲ್ಲಿ ಲಕ್ಷ್ಮೀಪೂಜೆ ನಡೆದಿರಬೇಕು. ಬಹಳ ಜನ ಗಂಡಸರು ಹೆಂಗಸರು ಬಂದಿರಬೇಕು. ಇಂಥ ಸಮಯದಲ್ಲಿ ನಾನು ಅಲ್ಲಿ ಹೋಗಿ ನಿಲ್ಲುವೆನು. ಅವನ ಪಾಪವನ್ನು ಆಡಿ ತೋರಿಸುವೆನು. ಅವನ ಆನಂದದಲ್ಲಿ ವಿಷವನ್ನು ಬೆರಿಸುವೆನು. ನಾನು ಅವನ ಗೃಹ ಲಕ್ಷ್ಮೀ. ಆದರೆ ನನಗೆ ಮಾತ್ರ ದುಃಖ ದಲ್ಲಿ ನೂಕಿದ್ದಾನೆ ನಾನು ಬಡವಿ ಆದರೇನಾಯಿತು ? ಬಡವರಿಗೆ ಮಾನ ವಿಲ್ಲವೇ, ಶೀಲವಿಲ್ಲವೇ ? ನಾನುಬಡವಿಯಾಗಿದ್ದರೆ ನನ್ನ ಕಡೆ ಅವನು ಬಂದದ್ದೇಕೆ ? ಬರೀ ನನ್ನ ಸುಂದರ ಮುಖ ನೋಡಿ ಬಂದನೆ ? ಗಂಡಸರ

ಜಾತಿಯೋ ದುಷ್ಟವಾದುದು. ನಾನೂ ಸೇಡು ತೀರಿಸುವೆ. ಇಡೀ ಜಗತ್ತಿನ ಇದಿರು ಇವನ ನಿಜಸ್ವರೂಪವನ್ನು ಹೊರಗೆಡುವುವೆನು. ಲಕ್ಷ್ಮೀಪೂಜೆಯ ದೀಪಗಳು ಉರಿಯುತ್ತಿರ ಬೇಕು. ಆ ದೀಪದ ಬೆಳಕಿನಲ್ಲಿ ಇವನ ಹೊಲಸು ಕೃತ್ಯಗಳನ್ನು ಜಗತ್ತಿಗೆ ತೋರಿಸುವೆನು ಒದರಿ, ಒದರಿ ಹೇಳುವೆ........"

ಆದರೆ ಅವಳ ತೀವ್ರ ಭಾವನೆಯ ಶಕ್ತಿ ಕುಗ್ಗಿತು. ಕಾಲು ಸೋತವು. ಮನಸ್ಸಿನ ಶಕ್ತಿಯಿಂದ ಕೆಲಪೊಂದು ಅಂತರ ನಡೆದಳು. ಹೊಟ್ಟೆಯಲ್ಲಿ ಅನ್ನವಿಲ್ಲ ಮುಂದೆ ಹೆಜ್ಜೆ ಬೀಳುವದಾದರೂ ಹೇಗೆ ? ಹೊರಗೆ ಕತ್ತಲು ಇನ್ನು ಎಷ್ಟು ದೂರವಿದೆ ಆ ಊರು ? ಅವಳಿಗೆ ಕಲ್ಪನೆ ಇರಲಿಲ್ಲ.

ರಾಯಗಾಂವದಲ್ಲಿಯ ಜನರು ಮಲಗಿದ್ದರು. ದೀಪ ಆರಿದ್ದವು ಮತ್ತು ತಂಗಾಳಿ ಬೀಸುತ್ತಿತ್ತು. ಮೈ ಜುಮ್ಮೆನಿಸುವಂಥ ಮೈ ನಡುಗಿ ಸುವ ಚಳಿ ಇಂಥ ಚಳಿ ಈಗ ಎಷ್ಟೋ ವರುಷ ಇರಲಿಲ್ಲ ಮಾನಪ್ಪ ಎಚ್ಚರ ಇದ್ದ. ಅವನ ಬಾಗಿಲು ತೆರದಿತ್ತು. ಅವನು ಬಾಗಿಲಿಗೆ ಬರ ತಿದ್ದ, ತನ್ನ ಬಂಗಾರ ಬಂತೇನು ನೋಡುತ್ತಿದ್ದ. ಬಾಗಿಲಲ್ಲಿ ನಿಲ್ಲುವನು ಮತ್ತು ದೂರ ನೋಡುವನು ಚಳಿ ಎನಿಸಿದ ಕೂಡಲೆ ಒಳಗೆ ಹೋಗು ವನು ಮತ್ತು ಕುರ್ಚಿಯ ಮೇಲೆ ಕೂಡ್ರುವನು. ಅವನಿಗೆ ನಿದ್ದೆ ಬರ ಲಿಲ್ಲ ಎಲ್ಲ ಪಣತಿ ಆರಿದ್ದವು. ಒಂದೇ ಪಣತಿ ಮಾತ್ರ ಉರಿಯು ತ್ತಿತ್ತು. ಮಾನಪ್ಪ ಬಾಗಿಲ ಮುಚ್ಚಿ ಮಲಗಬೇಕು ಎಂದು ಬಾಗಿಲಲ್ಲಿ ಬಂದು ನಿಂತ. ಬಾಗಿಲ ಮುಚ್ಚುವದನ್ನು ಮರೆತು ವಿಚಾರ ಮಗ್ನನಾಗಿ ಹಾಸುಗೆಯ ಮೇಲೆ ಅಡ್ಡಾದನು. ಅವನಿಗೆ ಚಳಿ ಎನಿಸ ತ್ತಿತ್ತು. ಮನೆ ಯಲ್ಲಿ ಸಾಕಷ್ಟು ಹೊದೆದುಕೊಳ್ಳಲಿಕ್ಕೆ ಇದ್ದಿಲ್ಲ. ಅವನು ಎದ್ದ, ಉರಿ ಹಚ್ಚಿದ ಮತ್ತು ಬೆಂಕಿಯ ಹತ್ತಿರ ಕಾಸುತ್ತ ಕುಳಿತ ಬೆಂಕಿ ಬಂಗಾರದಂತೆ ಹೊಳೆ ಯುತ್ತಿತ್ತು. ಇದೇ ತನ್ನ ಬಂಗಾವೆಂದನಿಸಿತು. ಕೆಂಡಕ್ಕೆ ಕೈ ಹಚ್ಚಲಿಕ್ಕೆ ಹೋದ ಆದರೆ ಅಷ್ಟರಲ್ಲಿ ಎಚ್ಚರಾದ

ಮಾನಪ್ಪನ ಮನಃಸ್ಥಿತಿ ಹೀಗಿದ್ದಾಗ ಅವನ ಗುಡಿಸಲದಿಂದ ಕೆಲವು ಅಂತರದ ಮೇಲೆ ಒಂದು ಬೇರೆ ಪ್ರಸಂಗ ನಡೆದಿತ್ತು. ಆ ತರುಣಿ ತೀರ ಶಕ್ತಿಹೀನಳಾಗಿದ್ದಳು. ಅವಳ ಆಶೆ ಬಯಲಾಗಿತ್ತು. ಇನ್ನು ಅವಳ ಜೀವ ಹೋಗುವದೊಂದು ಮಾತ್ರ ಉಳಿದಿತ್ತು. ಅವಳ ಹತ್ತಿರ ಒಂದು ಸಣ್ಣ

ಸೀಸೆ ಇತ್ತು. ಅದರೊಳಗಿಂದ ಏನೋ ಕುಡಿದಳು. ಮಾತ್ರ ಪ್ರೇಮವು "ಕುಡಿಬೇಡ" ಅನ್ನುತ್ತಿತ್ತು. ನಿರಾಶೆ ಹೇಳುತ್ತಿತ್ತು "ಕುಡಿ, ಈ ಜಗತ್ತಿನಲ್ಲಿ ಬದುಕುವದರಲ್ಲಿ ಏನೂ ಅರ್ಥವಿಲ್ಲ." ಅದನ್ನು ಕುಡಿಯುವ ಪೂರ್ವದಲ್ಲಿ ಅವಳು ತನ್ನ ಮಗುವಿಗೆ ಮೊಲೆ ಉಣಿಸಿದಳು ಮುದ್ದಿಟ್ಟಳು ತನ್ನ ಸೀರೆಯನ್ನು ಹರಿದು ಹೊದಿಕೆ ಹಾಕಿದಳು ಮಗುವಿಗೆ ಚಳಿ ಹತ್ತಬಾರದೆಂದು ಸಾಯುವ ಪೂರ್ವದಲ್ಲಿ ಅವಳು ಇದನ್ನೆಲ್ಲ ಮಾಡಿದಳು. ಆ ಮೇಲೆ ಆ ಕೂಸನ್ನು ಎತ್ತಿಕೊಂಡು ವೇಗದಿಂದ ಹೊರಟಳು. ಆ ಪೇಯದ ಪರಿಣಾಮ ಅವಳ ಮೇಲೆ ಆಗಹತ್ತಿತ್ತು. ಎಷ್ಟು ಹೊತ್ತು ಹಾಗೇ ನಡೆಯುವಳು ? ಇನ್ನು ಹೆಜ್ಜೆ ಎತ್ತುವದಾಗಲಿಲ್ಲ. ಕೊನೆಗೆ ಮಗುವನ್ನು ಗಟ್ಟಿಯಾಗಿ ಅಪ್ಪಿಕೊಂಡು ಭೂಮಿಯ ಮೇಲೆ ಮಲಗಿದಳು. ಭೂತಾಯಿಯ ತೊಡೆಯ ಮೇಲೆ ಮಲಗಿದಳು. ಮೈಯಲ್ಲಿಯ ಕಾವು ಕಡಿಮೆಯಾಗಹತ್ತಿತು, ಪ್ರೇಮ ಕುಗ್ಗಹತ್ತಿತು. ಮಗುವನ್ನು ಗಟ್ಟಿ ಹಿಡಿದ ಕೈ ಸಡಿಲಾದವು. ಮಗುವನ್ನು ಪ್ರೀತಿಯಿಂದ ನೋಡುವ ಕಣ್ಣು ಮುಚ್ಚಿದವು ಆ ತಾಯಿಯ ಪ್ರಾಣವು ಹಾರಿಹೋಗಿತ್ತು. ಅಯ್ಯೋ !

ಮಗುವಿಗೆ ಎಚ್ಚರಾಯಿತು ತಾಯಿಯ ಕೈ ನೋಡಹತ್ತಿತು. ಆ ಕೈ ತನ್ನನ್ನು ಅಪ್ಪಿಕೊಳ್ಳಬೇಕೆಂದು ಅದಕ್ಕೆ ಅನಿಸುತ್ತಿತ್ತು. ಆದರೆ ಆ ಕೈ ದೂರ ಹೋಗಿದ್ದವು. ಅಷ್ಟರಲ್ಲಿ ಎದುರಿಗೆ ಇರುವ ಮನೆಯಲ್ಲಿ ಕಾಣುವ ದೀಪದತ್ತ ಆ ಮಗುವಿನ ದೃಷ್ಟಿ ಹೊರಳಿತು. ಗುಡಿಸಲದ ಬಾಗಿಲ ತೆರೆದಿತ್ತು ಮಗು ಹಾಗೆ ಒಳಗೆ ಹೋಯಿತು ಒಲೆಯ ಹತ್ತಿರ ಹೋಯಿತು. ಅದಕ್ಕಷ್ಟು ಕಾವು ದೊರೆಯಿತು. ತನ್ನ ವಿಚಾರದಲ್ಲೇ ಮಗ್ನನಾದ ಮಾನಪ್ಪನ ಲಕ್ಷವು ಆ ಮಗುವಿನತ್ತ ಹೊರಳಿತು ಬಂಗಾರದಂಥ ಆ ಮಗು ಅವನು ಅದರತ್ತ ನೋಡುತ್ತ ಕೂತ ಮತ್ತು ಎತ್ತಿಕೊಂಡನು. 'ಮಾ, ಅಮ್ಮಾ, ಅಮ್ಮಾ' ಎಂದು ಅನ್ನುತ್ತಿತ್ತು ಆ ಮಗು ಮಾತಾಡುವ ಬಂಗಾರ, ಜೀವಂತ ಬಂಗಾರ ದೊರೆಯಿತು ಮಾನಪ್ಪನಿಗೆ ಆ ಮಗುವನ್ನು ಕರಕೊಂಡು ಮುದುಕ ಕುಣಿಯಲಿಕ್ಕೆ ಹತ್ತಿದ. ಅದರ ಮೈಮೇಲೆಲ್ಲ ಕೈಯಾಡಿಸಿದ. ಅದೊಂದು ಸುಂದರ ಹುಡುಗಿ ಇತ್ತು ಕಣ್ಣು ತೇಜಸ್ಸುಳ್ಳವಿದ್ದವು. ತಲೆಯ ಮೇಲೆ ಕಪ್ಪಗಾದ ಕೂದಲು

ನ್ನೈ ಕೆಂಪಗಿತ್ತು. ಅಂಬೆಗಾಲಿಕ್ಕುತ್ತ ಬಂದಿದ್ದರಿಂದ ಅಲ್ಲಲ್ಲಿ ಮಣ್ಣು ಹತ್ತಿತ್ತು. ಮಾನಪ್ಪ ಅವಳ ಕಾಲು ಒತ್ತಿದನು. "ಎಲ್ಲಿಂದ ಬಂದಿತು ಈ ಬಂಗಾರ, ಸುಂದರ ಬಂಗಾರ!" ಅನ್ನುತ್ತ ಮಗುವಿಗೆ ಮುದ್ದಿಡುತ್ತಿದ್ದ. ಯಾವಾಗ ಬೆಳಗಾಗತದ, ಯಾವಾಗ ಸಾಳವ್ವಗ ಈ ಸುದ್ದಿ ತಿಳಿಸುತ್ತೇನೆ ಎಂದಾಗಿತ್ತು ಅವನಿಗೆ. ಆ ಹುಡುಗಿ ಮಾನಪ್ಪನ ತೊಡೆಯ ಮೇಲೆ ಮಲಗಿದ್ದಳು. ಮಾನಪ್ಪನಿಗೂ ಸ್ವಲ್ಪ ಹೊತ್ತಿನ ಮೇಲೆ ನಿದ್ದೆಹತ್ತಿತು.

ಹೊರಗೆ ಹಕ್ಕಿಗಳು ಕಿಲಿಕಿಲಿ ಮಾಡುತ್ತಿದ್ದವು. ಮಗುವಿಗೆ ಎಚ್ಚರವಾಯಿತು. 'ಅವ್ಮಾ ಅವ್ಮಾ' ಎಂದು ಕೂಗಹತ್ತಿತು. ಬಾಗಿಲದ ಹತ್ತರ ಹೋಗಿ ಹೊರಗೆ ಹೋಗಲಿಕ್ಕೆ ಹತ್ತಿತು. ಎಲ್ಲಿ ಹೊರಟಿತು ಈ ಮಗು? ಅವಳ ತಾಯಿ ಹೊರಗೆ ಇದ್ದಾಳೆಯೇ? ಆ ಮಗುವನ್ನು ಎತ್ತಿಕೊಂಡು ಮಾನಪ್ಪನು ಗುಡಿಸಲದ ಹೊರಗೆ ಬಿದ್ದನು ಅತ್ತಿತ್ತ ನೋಡಹತ್ತಿದ. ಆಗ ಕೆಲವು ಅಂತರದ ಮೇಲೆ ಏನೋ ಬಿದ್ದಂತೆ ತೋರಿತು. ಅಲ್ಲಿ ಹೋದ. ಓರ್ವ ಅನಾಥ ಹೆಣ್ಣುಮಗಳು ಸತ್ತು ಬಿದ್ದಿದ್ದಳು. ಆ ಹುಡುಗಿ ಕೆಳಗೆ ಇಳಿಯಲಿಕ್ಕೆ ಹತ್ತಿತು. ಮಾನಪ್ಪ ಅವಳನ್ನು ಕೆಳಗೆ ಇಟ್ಟ. ಮಗು ಆ ತನ್ನ ತಾಯಿಯ ಹತ್ತಿರ ಹೋಯಿತು. ಕೈ ಎಳೆಯಲಿಕ್ಕೆ ಹತ್ತಿತು. ಆದರೆ ಆ ಕೈ ಅವಳನ್ನು ಹತ್ತಿರ ತಗೊಳ್ಳಲಿಲ್ಲ. ಹಾಲು ಕುಡಿಯಲು ಪ್ರಯತ್ನಿಸಿತು. ಕಣ್ಣು ತೆರೆಯಲಾರಂಭಿಸಿತು. 'ಅವ್ಮಾ, ಅವ್ಮಾ' ಎಂದು ತಾಯಿಯನ್ನು ಎಚ್ಚರಗೊಳಿಸಲಾರಂಭಿಸಿತು ತಾಯಿ ಮಾತನಾಡಲಿಲ್ಲ. ಏಳಲಿಲ್ಲ, ಕೈಆಡಿಸಲಿಲ್ಲ, ಕಣ್ಣು ತೆರೆಯಲಿಲ್ಲ ಹುಡುಗಿ ಅಳಹತ್ತಿತು. ಅಳುವದರಿಂದಾದರೂ ತಾಯಿ ಏಳಬಹುದೆಂದು ಅನಿಸಿತೋ ಏನೋ? ತಾಯಿ ಇಷ್ಟು ಕಠೋರಳಾದಳೇ?

ಮಾನಪ್ಪನ ಹೃದಯವು ಕಳವಳಗೊಂಡಿತು ಅವನು ಆ ಹುಡುಗಿಯನ್ನು ಎತ್ತಿಗೊಂಡನು. ಹುಡುಗಿ ಅವನನ್ನು ಅಪ್ಪಿಗೊಂಡಿತು. ಅವನು ಅಲ್ಲಿಂದ ಹೊರಟ. ದಿಗಂಬರಾಯರತ್ತ ಹೋದ. ಈಗ ಏನೋ ಜನ ಅದೇ ಎದ್ದಿತ್ತು. ಅಷ್ಟರಲ್ಲಿ ಅಂಗಳದಲ್ಲಿ ಮಾನಪ್ಪ ಒಂದು ಹುಡುಗಿ ತಗೊಂಡು ಬಂದದ್ದು ನೋಡಿದರು ಅವರಿಗೆಲ್ಲ ಆಶ್ಚರ್ಯ!

"ಇದೇನು? ಈ ಹುಡುಗಿ ಎಲ್ಲಿಂದ ತಂದಿರಿ? ನಿಮ್ಮ ಮುಖ ಹೀಗೇಕೆ? ಏನಾಯಿತು?" ಎಂದು ಕೇಳಿದರು.

"ಓರ್ವ ಅನಾಥ ಮಹಿಳೆಯು ಸತ್ತು ಬಿದ್ದಿದ್ದಾಳೆ. ಅವಳ ಮಗಳು ಈ ಹುಡುಗಿ ಅಂಬೆಗಾಲಿಕ್ಕುತ್ತ ನನ್ನ ಗುಡಿಸಲದಲ್ಲಿ ಬಂದಿತು ಈ ಮಗು. ಬೇಗ ನಡೆಯಿರಿ. ಡಾಕ್ಟರರನ್ನು ಕರೆಸಿರಿ. ಆ ಸ್ತ್ರೀಯು ಜೀವದಿಂದ ಇರುವಳೋ ಇಲ್ಲವೋ ನೋಡುವ. ಆ ಸ್ತ್ರೀಯ ಮೇಲೆ ಮತ್ತು ಈ ಮಗುವಿನ ಮೇಲೆ ದಯೆ ತೋರಿಸರಿ.

ದಿಗಂಬರರಾಯರ ಅಂಗಳದಲ್ಲಿ ಗದ್ದಲ. ಸುತ್ತಮುತ್ತಲಿನ ಜನ ಎಲ್ಲಿ ಕೂಡಿತು. ಸಂಪತರಾಯ ಆ ಹುಡುಗಿಯನ್ನು ನೋಡಿದ. ಕರೆದುಕೊಳ್ಳಬೇಕು ಎಂದು ಅನಿಸಿತು.

"ಆ ಹೆಣ್ಣುಮಗಳು ಜೀವಂತ ಇದ್ದಾಳೆಯೇ? ಎಂದು ಗಾಬರಿಯಿಂದ ಕೇಳಿದ. "ಜೀವಂತವಿರುವ ಲಕ್ಷಣಗಳು ತೋರುವದಿಲ್ಲ ಆದರೂ ಡಾಕ್ಟರರಿಗೆ ಕರೆದು ತೋರಿಸುವ" ಮಾನಪ್ಪ ಅಂದ.

ಜನ ಹೊರಟಿತು. ಡಾಕ್ಟರರು ಇನ್ನೂ ಹಾಸುಗೆಯಲ್ಲಿದ್ದರು. ಈಗೆ ಯಾಕೆ ತಮಗೆ ತೊಂದರೆ ಕೊಡಲು ಬಂದರು ಅಂದುಕೊಂಡರು. ಹೊರಗೆ ಚಳಿ. ಅವರು ಬೆಚ್ಚಗಾಗಿ ಮಲಗಿದ್ದರು. ಆದರೆ ಜನರು ಕೂಗಾಡಿ ಅವರನ್ನು ಎಬ್ಬಿಸಿದರು. ಡಾಕ್ಟರರು ಸಿಟ್ಟಿನ ಭರದಲ್ಲಿ ಎದ್ದು ಹೊರಗೆ ಬಂದರು. ಆದರೆ ಅವರು ಎದುರಿಗೆ ಸಂಪತರಾಯರನ್ನು ಕಂಡರು!

"ನೀವೂ ಬಂದೀರಿ? ಇಂಥ ಚಳಿಯಲ್ಲಿ ಹೊರಗೆ ಬಿದ್ದಿರಿ. ನಿಮ್ಮಂಥ ಶ್ರೀಮಂತರು ಈ ಹೊತ್ತಿಗೆ ಯಾಕೆ ಹೊರಗೆ? ನಾನು ಹೋಗತೇನೆ ಮತ್ತು ಏನಿದೆ ನೋಡುತ್ತೇನೆ" ಅಂದರು ಡಾಕ್ಟರರು.

"ನಾನೂ ಬರತೇನೆ" ಸಂಪತರಾಯರು ಅಂದರು.

"ದಯಾವಂತರು ನೀವು. ನಿಮ್ಮ ಹೃದಯ ದೊಡ್ಡದು ಅನಾಥರಿಗಾಗಿ ಎಷ್ಟು ಕನಿಕರ" ಸಾಳವ್ವ ಅಂದಳು.

ಇಡೀ ಊರೇ ಆ ಅನಾಥ ಸ್ತ್ರೀಯ ಸುತ್ತ ಮುಕರಿತು. ಡಾಕ್ಟರರು ನಾಡಿ ನೋಡಿದರು. ಪ್ರಾಣ ಯಾವಾಗೋ ಹೋಗಿತ್ತು. ಅಯ್ಯೋ ಎಂದು ಜನ ಮರಗಿತು ಚಿಕ್ಕ ಹುಡುಗಿ ಬಿಟ್ಟು ತಾಯಿ ಹೋಗಿದ್ದಳು. ಪಾಪ ಅನಾಥ ಹುಡುಗಿ !

" ಈ ಹುಡುಗಿಯನ್ನು ಇನ್ನಾರು ನೋಡುವರು ? " ಡಾಕ್ಟರರು ಅಂದರು. " ನಾನು ನೋಡುವೆ ಮಾನಪ್ಪ ತರ್ರಿ ಇಲ್ಲಿ ಆ ಹುಡುಗಿಯನ್ನು. ನಮಗೇನು ಕಡಿಮೆ ಇಲ್ಲ. ಬಂಗಾರದಂಥ ನಾನೆಲ್ಲ ಮಾಡತೇನಿ. " ಸಂಪತರಾಯು ಅಂದ.

" ಇಲ್ಲ, ನಾನು ಯಾರಿಗೂ ಕೊಡುವದಿಲ್ಲ. ಇದು ನನ್ನ ಬಂಗಾರ. ನನ್ನ ಗುಡಿಸಲಕ್ಕೆ ಬಂದಿದೆ. ನಾನೇ ಈ ಹುಡುಗಿಯನ್ನು ಜೋಪಾನ ಮಾಡುವೆ " ಹೀಗಂದ. ಮಾನಪ್ಪನು ಆ ಹುಡುಗಿಯನ್ನು ಗಟ್ಟಿಯಾಗಿ ಹಿಡಿದನು. ಆ ಹುಡುಗಿಯು ನಿಶ್ವಾಸದಿಂದ ಅವನನ್ನು ಅಪ್ಪಿಕೊಂಡಿತು. ಅವನು ಹುಡಿಗಿಗೆ ಮುದ್ದಿಟ್ಟನು.

" ಮಾನಪ್ಪ, ನಿಮ್ಮ ಮನೆಯಲ್ಲಿ ಯಾರೂ ಇಲ್ಲ. ನೀವು ಹೇಗೆ ಜೋಪಾನ ಮಾಡುವಿರಿ ? " ಯಾರೋ ಕೇಳಿದರು

" ಮತ್ಯಾರು, ಇಲ್ಲ, ಅಂತ ನನಗ ಮಾಡೋದ ಆಗತದ. ನನಗೆ ಎರಡನೆ ಉದ್ಯೋಗ ಇಲ್ಲ. ನಾನೇ ಈ ಹುಡುಗಿಗೆ ತಾಯಿ, ತಂದೆ ಎಲ್ಲ ಆಗುವೆ. " ಮಾನಪ್ಪ ಅಂದ

" ಆದೇನೆ ಇರಲಿ. ಈ ಹತ್ತು ರೂಪಾಯಿ ತಗೊ. ಆ ಹುಡುಗಿಗೆ ಚಲೋ ಉಣ್ಣಿ ಅರಿವೆ ಹಾಕು. ಯಾವಾಗಾರ ದುಡ್ಡು ಬೇಕಾದರ ನನಗೆ ಕೇಳು ಮಾನಪ್ಪ ನೀ ಈ ಹುಡಿಗಿ ಜೋಪಾನ ಮಾಡಿತಿದೀ ? ಆಶ್ಚರ್ಯ ಅದ ನಿಮ್ಮ ಗುಡಿಸಲಿಗೆ ಬಂದಳು ನಿಮ್ಮವಳಾದಳು ! " ಸಂಪತರಾಯು ಅಂದ. " ಈ ಮಹಿಳೆಯ ಅಂತ್ಯವಿಧಿ ಮಾಡಬೇಕಲ್ಲ ?" ಯಾರೋ ಅಂದರು " ಮಾಡಿರಿ, ಬಂದ ಖರ್ಚನ್ನೆಲ್ಲ ನಾನು ಕೊಡತೇನಿ" ಸಂಪತರಾಯರು ದುಡ್ಡು ಕೊಡುತ್ತ ಅಂದರು.

" ಎಷ್ಟು ಉದಾರ ಮನಸ್ಸು ! ಶ್ರೀಮಂತರ ಮನಸ್ಸೂ ಶ್ರೀಮಂತವಾದರೆ ಜಗತ್ತಿನಲ್ಲಿಯ ದುಃಖ ಉಳಿಯಲಿಕ್ಕೆ ಇಲ್ಲ " ಸಾಳವ್ವ ಅಂದಳು.

ಆ ತಾಯಿಯ ಶವಕ್ಕೆ ಅಗ್ನಿಸಂಸ್ಕಾರವಾಯಿತು. ಮಾನಪ್ಪ ಆ ಹುಡುಗಿಯನ್ನು ಕರಕೊಂಡು ಗುಡಿಸಲದಲ್ಲಿ ಕೂತಿದ್ದ. " ನನ್ನ ಬಂಗಾರ ತಿರುಗಿ ಬಂತು. ನಗುತ್ತ, ನಗುತ್ತ, ಸಜೀವವಾಗಿ ಸಾಕಾರವಾಗಿ ಬಂತು." ಹೀಗನ್ನುತ್ತಿದ್ದ. ಮತ್ತು ಆ ಹುಡುಗಿಗೆ ಮುದ್ದು ಇಡುತ್ತಿದ್ದ. ಆ ಹುಡುಗಿಯೂ ' ಮಾ, ಮಾ ' ಎಂದು ಅವನೊಡನೆ ಆಡುತಿತ್ತು.

---

# ಪ್ರಕರಣ ೫

## ಸಂಪತರಾಯರ ಮದುವೆ

"ಸಂಪತ, ನೀನು ಮದುವೆಗೆ ಸಿದ್ಧನಿರುವೆಯಲ್ಲ? ಹೌದು ಅನ್ನು. ನಾನೇನು ನಿನಗೆ ಜುಲುಮೆ ಮಾಡುವದಿಲ್ಲ. ಆದರೆ ಇಂದುಮತಿಯಂಥ ಹುಡುಗಿ ಸಿಗುವದು ದುರ್ಲಭ ಅವಳಿಗೆ ಎಲ್ಲ ಬರತದೆ. ಅಡುಗೆ ಮಾಡತಾಳೆ, ಚಿತ್ರ ಬರೆಯುತಾಳೆ, ಓದತಾಳೆ, ಹೊಲಿಗಿಯಲು, ಕಸೂತಿ ತೆಗೆಯಲು ಬರತದೆ. ಕವಿತೆ ಕೂಡ ಮಾಡತಾಳೆ. ಶ್ರೀಮಂತರ ಮಗಳಾದರೂ ಅವಳಿಗೆ ಆಲಸ್ಯ ಎಂಬುವದು ಗೊತ್ತಿಲ್ಲ. ಎಳ್ಳಷ್ಟು ಸೊಕ್ಕು ಇಲ್ಲ. ಯಾರಿಗೂ ನೋವಾಗು ವಂತೆ ಮಾತಾಡುವದಿಲ್ಲ. ಕಾಣಲಿಕ್ಕೆ ಸುಂದರ, ವ ನಸ್ಸೂ ಸುಂದರ. ಬೇಡ, ಆ ಹುಡುಗಿಯನ್ನು ನೋಯಿಸಬೇಡ, ಸಂಪತ ಹೆಚ್ಚು ಜಗ್ಗಿದರೆ ಹರಿಯು ತ್ತದೆ ಗಿಡಕ್ಕೆ ವೇಳೆಗೆ ಸರಿಯಾಗಿ ನೀರು ಗೊಬ್ಬರ ಬೀಳಬೇಕು. ಅಂದರೆ ಅವಕ್ಕ ಹಣ್ಣು ಹೂವು ಆಗುತ್ತವೆ. ಗಿಡದಬೇರು ಒಣಗಿದರೆ ನೀರಿನ ಪ್ರಯೋ ಜನವೇನು? ದಲಪತರಾಯರು ಈಗ ಬಹಳದಿನ ತಡೆದಿದ್ದಾರೆ. ಕೊನೆ ಗೊಮ್ಮೆ ನಿರ ಶರಾಗಿ ಯಾರಿಗಾದರೂ ಎರಡನೆಯವರಿಗೆ ಇಂದುಮತಿಯನ್ನು ಕೊಡಬಹುದು. ಅವಳಿಗೂ ಇಡೀ ಆಯುಷ್ಯದಲ್ಲಿ ದುಃಖವಾಗುವದು. ಯಾಕಂದರೆ ಅವಳು ನಿನ್ನನ್ನು ಪ್ರೀತಿಸುತ್ತಾಳೆ. ಹೇಳು ಹಾಗಾದರೆ" ತಂದೆ ಕೇಳಿದ.

"ಅಪ್ಪಾ, ನಾನು ಈ ಮದುವೆಗೆ ಸಿದ್ಧದ್ದೇನೆ ನಿಮ್ಮ !ಇಚ್ಛೆಗೆ ನನ್ನ ವಿರೋಧವಿಲ್ಲ ಇಷ್ಟು ದಿನ ನಿಮ್ಮ ಮನಸು ನೋಯಿಸಿದ್ದಕ್ಕೆ ಕ್ಷಮೆಮಾಡಿರಿ. ಕೆಲವೊಂದು ಕಾರಣಗಳ ಮೂಲಕ ನಾನು ಇಷ್ಟು ದಿನ ಈ ವಿಚಾರ ಮುಂದೂಡಿದ್ದೆ. ಇಂದುಮತಿಯ ಪ್ರೇಮದ ಪರೀಕ್ಷೆಯು ಇತ್ತು. ಈಗ ನೀವು ಹೇಳಿದಾಗ ನಾನು ಸಿದ್ಧನಿದ್ದೇನೆ" ಸಂಪತ ಅಂದನು.

ಮದುವೆ ನಿಶ್ಚಯವಾಯಿತು. ಶ್ರೀಮಂತರ ಮನೆಯ ಮದುವೆ. ಊರ ಜನರೆಲ್ಲ ಸಿದ್ಧತೆ ನಡೆಯಿಸಿದ್ದರು. ಉತ್ತಮವಾದ ಸುಶೋಭಿತವಾದ ಮಂಟ

ಪವು ಸಿದ್ಧವಾಯಿತು ಮಾನಪ್ಪ ಏನು ಮಾಡುತಿದ್ದ ? ಅವನು ವಧೂವರಿಗಾಗಿ ಉತ್ತಮವಾದ ನಯವಾದ ವಸ್ತ್ರಗಳನ್ನು ನೇಯುತ್ತಿದ್ದ. ಅವನಿಗೂ ತಕ್ಕ ವೇತನ ದೊರೆಯಿತು. ಅದನ್ನೆಲ್ಲ ಆವನು ಆ ಹುಡುಗಿಗಾಗಿ ಕಾಯ್ದಿಟ್ಟನು.

ಮದುವೆಯ ದಿನ ಬಂದಿತು. ಒಳ್ಳೇ ಸಂಭ್ರಮದಿಂದ ಮದುವೆಯಾಯಿತು. ವಧೂವರರು ಮಾಲೆ ಹಾಕಿದರು. ಬಜಂತ್ರಿ ಊದಿದರು. ರಾತ್ರಿ ದೊಡ್ಡ ಮೆರವಣಿಗೆ ಹೊರಟಿತು. ಕುದುರೆಯ ಮೇಲೆ ವಧೂವರರು ಕೂತಿದ್ದರು. ಮದ್ದು ಹಾರಿಸಿದರು. ಮಾನಪ್ಪ ಹುಡುಗಿಯನ್ನು ಕರಕೊಂಡು ಅವಳಿಗೆ ಮೆರವಣಿಗೆ ತೋರಿಸುತ್ತಿದ್ದ ಆ ಹುಡುಗಿ ನೋಡುತಿತ್ತು. ಸಂಪತರಾಯನ ಲಕ್ಷ್ಯ ಆ ಹುಡುಗಿಯತ್ತ ಸೆಳೆಯಿತು. ಅವನ ಕಣ್ಣಲ್ಲಿ ನೀರು ಬಂದವು. ತಾಯಿ ಇಲ್ಲದ ಮಗು. ಅಯ್ಯೋ !

ಊರ ಜನರಿಗೆ ಊಟ ಹಾಕಲಾಯಿತು ಮಾನಪ್ಪ ಹೋಗಲಿಲ್ಲ. ಅವನ ಮನೆಗೆ ಉಂಡಿ ಕಳಿಸಿದರು. ಆ ಹುಡುಗಿಗೆ ಸುಂದರ ಉಡುಪು ಕಳಿಸಿದರು. ಆದರೆ ಮಾನಪ್ಪ ಅವನ್ನು ಹುಡುಗಿಯ ಮೈಮೇಲೆ ಹಾಕಲಿಲ್ಲ ಅವ ಅಂದ, " ನಾನೇ ನೇಯ್ದು ಈ ಹುಡುಗಿಗೆ ಉತ್ತಮ ಅರಿವೆ ಮಾಡಿ ಹಾಕುವೆನು. ಬೇರೆಯವರು ಕಳಿಸಿದ ಅರಿವೆ ನಾನೇಕೆ ಹಾಕಲಿ ? "

ಊರವರೆಲ್ಲ ವಧೂವರರನ್ನು ಹರಸಿದರು. ಹೊಸ ಸಂಸಾರಕ್ಕೆ ಪ್ರಾರಂಭವಾಯಿತು. ಇಂದುಮತಿಯೇ ಮನೆಯೊಡತಿ. ಅವಳು ಬಂದ ಕೂಡಲೆ ಆ ಭವನಕ್ಕೆ ಹೊಸ ಕಳೆಯೇರಿತು. ಅವಳು ಇಡೀ ಭವನವನ್ನೆಲ್ಲ ಸ್ವಚ್ಛ ಮಾಡಿಸಿದಳು. ಮೇಲೆ ದೊಡ್ಡ ದಿವಾಣಖಾನೆಯಿತ್ತು. ಅಲ್ಲಿದ್ದ ಧೂಳಿಯನ್ನೆಲ್ಲ ತೆಗೆದು, ಅಲ್ಲಿ ಇದ್ದ ಚಿತ್ರಗಳನ್ನೆಲ್ಲ ಒರೆಸಿ, ನೆಟ್ಟಗೆ ಹಚ್ಚಿಸಿದಳು. ಲೋಡಗಳು ಇಡಲಾದವು. ಹೂವುಗಳು ಅಲ್ಲಲ್ಲಿ ಇಡಲ್ಪಟ್ಟವು. ದಿವಾಣಖಾನೆಗೆ ಕಳೆಯೇರಿತು.

" ಈಗ ಮನಸ್ಸಿಗೆ ಎಷ್ಟು ಪ್ರಸನ್ನತೆ ಅನಿಸತದೆ ? ಮೊದಲು ಇಲ್ಲಿ ಬರಬಾರದೆಂದು ಅನಿಸುತ್ತಿತ್ತು " ಸಂಪತರಾಯ ಅಂದನು.

" ಸ್ತ್ರೀಯರ ಕೈಯಲ್ಲಿ ಜಾದು ಇದೆ. ಅವರ ಕೈ ಹತ್ತಿದ ಕೂಡಲೆ ಅಮಂಗಲವಾದ್ದದ್ದೆಲ್ಲ ಮಂಗಲವಾಗುತ್ತದೆ. ಮರಣ ಜೀವನವಾಗುತ್ತದೆ. ಅಲ್ಲವೇ ? " ಇಂದುಮತಿ ನಗುತ್ತ ಅಂದಳು.

" ಹೌದು. ಸ್ತ್ರೀಯು ಸೌಂದರ್ಯ ದೇವತೆ. ಸ್ತ್ರೀ ಅಂದರೆ ವ್ಯವಸ್ಥೆ. ಸ್ತ್ರೀ ಅಂದರೆ ಅಚ್ಚುಕಟ್ಟುತನ. ಅವರಿಗೆ ಹೊಲಸು ಸೇರುವದಿಲ್ಲ. ಪಾತ್ರೆಗಳನ್ನು ತಿಕ್ಕುವರು. ಮನೆ ಸ್ವಚ್ಛ ಇಡುವರು. ಅರಿವೆ ಒಗೆಯುವರು. ಅವರಲ್ಲದೆ ಯಾರು ಸ್ವಚ್ಛತೆ ಕಾಯುವರು ? ಸ್ತ್ರೀ ಇಲ್ಲದ ಸಂಸಾರ ನೀರಸವಾದುದು. ಇಂದುಮತಿ, ನೀನು ಸಂಸಾರದ ಸಂಗೀತ, ಸೊಗಸು ಪುರುಷನು ಅವ್ಯವಸ್ಥಿತ. ನೀನು ಆವನ ಜೀವನದಲ್ಲಿ ಒಂದು ವ್ಯವಸ್ಥೆ ತಂದಿರುವಿ. ಇಂದೂ, ನಿನ್ನ ಕೈಯಲ್ಲಿ ಜಾದು ಇದೆ. ನಿನ್ನ ಸ್ಪರ್ಶದಲ್ಲಿ ಅಮೃತವಿದೆ " ಸಂಪತರಾಯ ಪ್ರೇಮದಿಂದ ಅಂದನು.

ಈಗ ಮನೆಯಲ್ಲಿಯ ಆಳುಗಳು ವೇಳೆಗೆಸರಿಯಾಗಿ ಕೆಲಸಮಾಡುತ್ತಿದ್ದ? ಮೊದಲು ತಮಗೆ ತಿಳಿದಾಗ ತಿಳಿದಂತೆ ಕೆಲಸ ಮಾಡುತ್ತಿದ್ದರು. ಆದರೆ ಬೆಳಗು ಹರಿಯುವದರಲ್ಲಿ ಅಂಗಳಕ್ಕೆ ಥಳಿ ಹೊಡೆಯುತ್ತಿದ್ದರು. ಯಾಕಂದರೆ ಇಂದುಮತಿ ಅಲ್ಲಿ ಬೆಳಗ್ಗೆ ರಂಗವಲ್ಲಿ ಹಾಕುತ್ತಿದ್ದಳು. "ಸೂರ್ಯನಾರಾಯಣನಿಗೆ ಯೋಗ್ಯ ಸ್ವಾಗತವು ಬೇಡವೇ ?" ಅನ್ನುವಳು.

ದಿಗಂಬರರಾಯರಿಗೂ ಸೊಸೆಯ ರೀತಿ ನೀತಿ ನೋಡಿ ಆನಂದ. ಈಗ ಅವರು ಅಶಕ್ತರಾಗಿದ್ದರು. ಬಹಳ ದಿನ ಬದುಕಲಿಕ್ಕಿಲ್ಲ ಅನಿಸಿತು. ಒಂದು ದಿನ ಸಂಪತ ಅವರ ಹತ್ತರ ಕೂತಾಗ ಅವರು ಅಂದರು, " ಸಂಪತ, ನಾನು ಇನ್ನು ಬಹಳ ದಿನ ಬದುಕುವಂತಿಲ್ಲ. ಈ ಜಗತ್ತನ್ನು ಮರೆಯಬೇಕು. ದೇವರತ್ತ ಮನಸು ಹೊರಳಬೇಕು. ನಿನಗೆ ಒಂದೆರಡು ಮಾತು ಹೇಳುತ್ತೇನೆ. ನಿನಗೆ ಉತ್ತಮ ಶೀಲವುಳ್ಳ, ಗುಣವುಳ್ಳ ಮತ್ತು ರೂಪವುಳ್ಳ ಪತ್ನಿ ದೊರೆತಿದ್ದಾಳೆ. ಒಂದು ರತ್ನ ದೊರೆತಿದೆ. ಅದನ್ನು ಕಾಪಾಡು ಅವಳಿಗೆ ತಕ್ಕಂತೆ ನಡೆ. ಸುಖದಿಂದ ಸಂಸಾರ ಸಾಗಿಸು ಯಾರನ್ನೂ ನೋಯಿಸಬೇಡ. ದುಡ್ಡಿನ ಜಂಬ ಬೇಡ. ಸಾಧ್ಯವಿದ್ದಷ್ಟು ಸಹಾಯ ಮಾಡು. ಸತ್ಯದಿಂದ ನ್ಯಾಯದಿಂದ ಬಾಳು. ನಮಗೆ ಇದ್ದ ದುಡ್ಡು ಸೊಕ್ಕಿನಿಂದ ನಡೆಯಲು ಅಲ್ಲ. ಅದು ಎರಡನೆಯವರಿಗೆ ಸಹಾಯ ಮಾಡಲಿಕ್ಕೆ ಅದೆ ಅದು ಬಡವರ ಇಡು

ಗಂಟು. ಸೋಮಾರಿತನ ಬೇಡ. ಯಾವಾಗಲೂ ಉದ್ಯೋಗ ಮಾಡು. ಅಂದರೆ ಮನಸ್ಸೂ, ದೇಹವೂ ಆರೋಗ್ಯದಿಂದ ಇರುತ್ತವೆ. ನನಗೆ ಯಾವ ಇಚ್ಛೆ ಇಲ್ಲ. ನೀವು ಸುಖದಿಂದ ಬಾಳಿರಿ. ಠಕಸೇನ ಎಲ್ಲಿ ಇದ್ದಾನೋ, ಏನೋ ? ಬೇಡ ಅವನ ನೆನಪು. ಎಂದಾದರೂ ಬಂದರೆ ಅವನನ್ನು ನೋಡು. ಏನೇ ಆದರೂ ಅವನು ನಿನ್ನ ತಮ್ಮ. ಆದರೆ ಎಚ್ಚರದಿಂದ ವರ್ತಿಸು. "

ತಂದೆಯ ಮಾತು ಕೇಳುವಾಗ ಸಂಪತರಾಯನ ಕಣ್ಣಲ್ಲಿ ನೀರು ಬರುತ್ತಿದ್ದವು. ಅಷ್ಟರಲ್ಲಿ ಇಂದುಮತಿ ಬಂದಳು. ಮಾವನ ಕಾಲು ಒತ್ತಲಿಕ್ಕೆ ಹತ್ತಿದಳು. ಅವನು ಅವಳತ್ತ ನೋಡಿ ಅಂದನು " ಇಂದೂ, ಎಲ್ಲವೂ ನಿನ್ನ ಕೈಯಲ್ಲಿದೆ. ಸಂಪತನನ್ನು ನಿನಗೆ ಒಪ್ಪಿಸಿದ್ದೇನೆ ಎಲ್ಲರನ್ನು ಕಾಯ್ದುಕೊಂಡು ಹೋಗು. ದಿವಾಣಖಾನೆ ಸ್ವಚ್ಛ ಮಾಡಿದಂತೆ ಅವನ ಮನಸ್ಸನ್ನು ಸ್ವಚ್ಛ ಇಡು. ಅಲ್ಲಿ ಹೂವಿನ ಗುಚ್ಛಗಳನ್ನಿಟ್ಟು ಕಳೆತಂದಂತೆ. ಸಂಪತನ ಹೃದಯ ಮಂದಿರವನ್ನು ಸ್ವಚ್ಛ ಇಡು. ಅದು ನಿರ್ಮಲವಿರುವಂತೆ ನೋಡಿಕೊ. ಅಲ್ಲಿ ಭಕ್ತಿ, ದಯೆ, ಪ್ರೇಮಗಳ ಸುಗಂಧ ಬೀರುವಂತೆ ಮಾಡು. ನೀನು ವಿಶಾಲ ಹೃದಯದವಳು ನನಗೆ ಯಾವ ಚಿಂತೆ ಇಲ್ಲ ಸಂಪತನ ಜೀವನ ನೌಕೆಯ ಚುಕ್ಕಾಣಿಯಾಗು ನೀನು. ಪರಸ್ಪರರ ಇಚ್ಛೆಗಳನ್ನು ನಡೆಯಿಸಿರಿ ಜಗ್ಗಾಟ, ಜಗಳಾಟ ಬೇಡ. ಪರಸ್ಪರರ ವಿಷಯ ಎಳ್ಳಷ್ಟು ಸಂಸಯ ಬೇಡ. ಸಂಶಯ ಬಂದರೆ ಆಡಿ ತೋರಿಸಿ ಅದನ್ನು ದೂರ ಮಾಡಿರಿ. ಬಿಚ್ಚುಮನಸಿನಿಂದ ಇರಬೇಕು ಪ್ರೇಮವು ಯಾವಾಗಲೂ ಮುಕ್ತವಿರುತ್ತದೆ. ಪ್ರೇಮವು ಅಂಜುಬುರಕವಲ್ಲ. ಎಂದಾದರೂ ಸಂಶಯ ಬಂದರೆ ಕೇಳಿರಿ. ಜಗಳಾಟ ಆದರೆ ಅದನ್ನು ಮರೆತುಬಿಡಿರಿ ಜಗಳಾಟ ಮರೆತು ನಗುವವನೇ ನಿಜವಾದ ಮನುಷ್ಯ. ನಿನಗೆಲ್ಲ ತಿಳಿತದೆ ಇಂದೂ ! ಆದರೆ ನನಗೆ ತಡೆಯುವದಾಗುವದಿಲ್ಲೆಂದು ಹೇಳತೇನೆ."

ದಿಗಂಬರರಾಯರು ಇಬ್ಬರ ಕೈಗಳನ್ನು ತಮ್ಮ ಕೈಯಲ್ಲಿ ಹಿಡಿದರು. ಆಮೇಲೆ ಅವರೀರ್ವರ ತಲೆಯ ಮೇಲೆ ಕೈಯಿಟ್ಟು ಅವರಿಗೆ ಆಶೀರ್ವದಿಸಿದರು. ಸಂಪತ–ಇಂದೂ, ಅವರ ಕಣ್ಣಲ್ಲಿ ಆನಂದದ ಅಶ್ರು ನಿಂತವು. ಇಬ್ಬರ ಕಣ್ಣಲ್ಲಿಯೇ ಏಕೆ ? ಮೂವರ ಕಣ್ಣಲ್ಲಿಯೂ ನೀರು ನಿಂತವು.

ದಿಗಂಬರರಾಯರ ಹೃದಯ, ಅಪರಿಬ್ಬರ ಹೃದಯಗಳು ಉಕ್ಕೇರಿ ಬಂದವು. ದಿಗಂಬರರಾಯರ ಮರಣವು ಸಮೀಪಿಸಿತು.

ಒಂದು ದಿನ ದಿಗಂಬರರಾಯರು ದೇವರ ಕಡೆಗೆ ಹೋದರು. ಇಡೀ ಊರೇ ಹಳಹಳಿಸಿತು. ಎಷ್ಟೋ ಗೆಳೆಯರು, ಆಶ್ರಿತರು, ಆಪ್ತರು, ಇಷ್ಟರು ಸಮಾಚಾರಕ್ಕೆ ಬಂದು ಹೋದರು. ಕ್ರಮೇಣ ದುಃಖ ಕಡಿಮೆಯಾಯಿತು. ಸಂಪತರಾಯ ಯಜಮಾನನಾದ ಅವನು ಮತ್ತು ಇಂದುಮತಿ ಇಬ್ಬರೂ ಸುಖದಿಂದ ಬಾಳಹತ್ತಿದರು ಸಂಪತರಾಯರ ಕಾರಭಾರವು ಒಳ್ಳೆಯದಾಗಿ ನಡೆಯತೊಡಗಿತು.

---

# ಪ್ರಕರಣ ೬

## ಭಂಗಾರಿ

ಮಾನಪ್ಪನ ಜೀವನದಲ್ಲಿ ಒಂದು ಕ್ರಾಂತಿಯೇ ಆಯಿತು. ಆ ಹುಡುಗಿಯ ಎಲ್ಲ ಕೆಲಸವನ್ನು ತಾನೇ ಮಾಡುವನು. ಮಕ್ಕಳನ್ನು ಹೇಗೆ ಜೋಪಾನ ಮಾಡಬೇಕು ಅನ್ನುವದು ಅವನಿಗೆ ಗೊತ್ತಿರಲಿಲ್ಲ. ಪ್ರೇಮವು ಮನುಷ್ಯನಿಗೆ ಎಲ್ಲವನ್ನು ಕಲಿಸುತ್ತದೆ. ಅಲ್ಲದೆ ಸಾಳವ್ವ ಹೇಳಕೊಡಲಿಕ್ಕೆ ಇದ್ದಳು.

"ಮಾನಪ್ಪ, ನಿಮಗೆ ಈ ಹುಡುಗಿಯ ಮೈಯಲ್ಲಿ ಅಂಗಿ ಹಾಕಲಿಕ್ಕೆ ಬರುವದೋ? ಇಲ್ಲದಿದ್ದರೆ ಚಿಕ್ಕಕೈ ಅತ್ತಿತ್ತ ಜಗ್ಗಿ ಹಾಕುವಿರಿ. ನಾನು ತೋರಿಸಲ್ಯಾ ?" ಸಾಳವ್ವ ಕೇಳಿದಳು.

"ತೋರಿಸರಿ, ಒಮ್ಮೆ ತೋರಿಸಿದರೆ ಸಾಕು, ನಾನು ಕಲಿಯುವೆ. ಹೇರಳು ಹೇಗೆ ಹಾಕಬೇಕು ? ಹಗಲೆಲ್ಲ ಕೂದಲು ಕಣ್ಣ ಮೇಲೆ ಬರತಾವ. ಇಲ್ಲಾದರ ಎಲ್ಯಾರ ಮೆಳ್ಳಗಣ್ಣಿನಾಕಿ ಆದಾಳು ? ಹೆರಳು ಹಾಕಿ ತೋರಿಸರಿ" ಮಾನಪ್ಪ ಅಂದ.

"ನಾನು ದಿನ ಬಂದು ಹೆರಳಹಾಕಿ ಹೋಗುವೆ" ಸಾಳವ್ವ ಅಂದಳು

"ಬೇಡ. ಎಲ್ಲ ನನ್ನಿಂದ ಆಗಬೇಕು ನಾ ಎಲ್ಲ ಮಾಡತೇನಿ ನೀವು ನನಗೆ ಕಲಿಸರಿ. ಅದರಂತೆ ಅವಳಿಗೆ ಹೇಗೆ ಎರೆಯಬೇಕು ಅದನ್ನು ತೋರಿಸಿರಿ. ಕೂದಲು ಸ್ವಚ್ಛ ಇರಬೇಕು. ಇಲ್ಲದಿದ್ದರ ಹೇನು ಆದಾವು" ಮಾನಪ್ಪ ಅಂದ.

"ನಾನು ಒಮ್ಮೆ ಎರೆದು ತೋರಿಸತೀನಿ. ಆದಿರಲಿ. ಈ ಹುಡುಗಿ ಹೆಸರು ಏನು ಇಡೋಣ ? ಯಾವ ಹೆಸರಿನಿಂದ ಕರೆಯಬೇಕು ? ಹೆಸರು ಸಸಾರ ಇರಬೇಕು ಮತ್ತು ಚಂದನೂ ಇರಬೇಕು" ಸಾಳವ್ವ ಅಂದಳು.

"ನನಗೊಬ್ಬ ತಂಗಿ ಇದ್ದಳು. ಈಗ ಅವಳ ನೆನಪೂ ಮರೆತೀನಿ.

ಈ ಹುಡುಗಿ ನೋಡಿ ನನ್ನ ತಂಗಿಯ ನೆನಪು ಆಯಿತು ನನ್ನ ತಂಗೀನೆ ದೇವರ ಮನೆಯಿಂದ ತಿರುಗಿ ಬಂದಾಂಗ ಅನಸತದ. ತಂಗಿಯ ಹೆಸರೇ ಇಡಬೇಕು ಅಂದಿದ್ದೆ. ಆದರ ಆ ಹೆಸರು ಅನಲಿಕ್ಕೆ ಕಠಿಣ. ನೀವ ಒಂದು ಹೆಸರು ಹೇಳಿರಲ್ಲ" ಮಾನಪ್ಪ ಅಂದ.

"ಬಂಗಾರಿ ಅನ್ನೋಣ ನಿಮ್ಮ ಕಳಕೊಂಡ ಬಂಗಾರ ಅದು ಲಕ್ಷ್ಮೀಪೂಜಿ ದಿನ ತಿರುಗಿ ಬಂದದ. ಬಂಗಾರಿ ಎಷ್ಟು ಸಸಾರ ಮತ್ತು ಸೊಗಸಿನ ಹೆಸರು ಅದೆ" ಸಾಳವ್ವ ಅಂದಳು.

"ಬಂಗಾರಿ ಎಷ್ಟು ಚಂದ ಅವ ಹೆಸರು. ನಿಮ್ಮ ಮನಸಿನ್ಯಾಗ ಹ್ಯಾಂಗ ಬಂತು ! ನನ್ನ ಬಂಗಾರ. ಓಡ್ಯಾಡೊ ಬಂಗಾರ" "ಮಾನಪ್ಪ ಅಂದ. ಮಾನಪ್ಪ ಬಂಗಾರಿನ್ನ ಕಾಲಮೇಲೆ ಕೂಡಿಸಿಕೊಂಡು ಎಣ್ಣಿ ಹಚ್ಚತಿದ್ದ, ಅರಶಿಣ ಹಾಲು ಹಚ್ಚತಿದ್ದ. ಬಿಸಿ ನೀರಿಲೆ ಎರಿತಿದ್ದ. ಆ ಮೇಲೆ ವೈ ಒರಸಿ ಅರಿವಿ ಹಾಕಿ ಹಾಡಹಾಡಿ ಅವಳನ್ನು ಮಲಗಿಸತಿದ್ದ. ಒಂದ ದಿವಸ ಹೀಂಗ ಹಾಡು ಹಾಡಕೋತ ಮಾನಪ್ಪ ಬಂಗಾರಿನ್ನ ಮಲಗಿಸತಿದ್ದ, ಆಗ ಸಾಳವ್ವ ಬಂದಳು.

"ನಿಮಗೂ ಹಾಡ ಹಾಡಲಿಕ್ಕೆ ಬರತಾವ ಅಲ್ಲ ? ಎಷ್ಟು ಚಲೋ ಅನ್ನತೀರಿ ?" ಅವಳು ಅಂದಳು.

"ನಾ ಎಲ್ಲ ಮರೆತಿದ್ದ. ಬಂಗಾರಿ ಬಂದಳು, ನನ್ನ ನೆನಪು ಎಲ್ಲ ತಿರ ಗಿತು. ನನ್ನ ತಂಗಿ ಇದ್ದಾಗ ನಾನು ಹಾಡು ಅನತಿದ್ದೆ. ನನ್ನ ತಂಗಿ ಸಣ್ಣಾಕಿ ಇದ್ದಾಗ ನಮ್ಮ ತಾಯಿತಂದೆ ಸತ್ತರು. ನಾನೇ ಆಕಿ ಜೋಪಾನ ಮಾಡಿದೆ. ಆಗ ಅಂದ ಹಾಡು, ಈಗ ಎಲ್ಲ ನೆನಪಾಗತಾವೆ" ಮಾನಪ್ಪ ಅಂದ.

"ಮಲಗಿದಾಳ ಕಾಣಸತದ" ಸಾಳವ್ವ ಕೇಳಿದಳು.

"ಮಲಗಿದಾಳು. ಈಗ ತನ್ನಷ್ಟಕ್ಕೆ ತಾನ ಹೊರಗೆ ಹೋಗತಾಳ. ಒಳಗ ತಂದರ ಮತ್ತೆ ಹೊರಗೆ ಹೋಗತಾಳ. ಈಗ ಕಾಲ ಚಿಗತಾವ ಈಕಿಗೆ ನನಗ ಅಂಜಿಕೆ ಅನಸತದ ದನಕರ ಹಾದ್ಯಾಗ ಹೋಗತಿರತಾವ, ಎಲ್ಯಾರ ಕೋಡಗೀಡು ಹೊಡದಾವು. ಸ್ವಲ್ಪು ಸಿಟ್ಟ ಮಾಡಿದರ ಅಳಲಿಕ್ಕೆ ಹತ್ತಾಳ. ಆಗ ನಾ ಕರಕೊಂಡರ ಸುಮ್ಮನಾಗತಾಳ. ಸಿಟ್ಟಿನ ಮಾತೂ ಸ್ವಲ್ಪೂ ಸಹನ ಆಗುವದಿಲ್ಲ" ಮಾನಪ್ಪ ಹೇಳತಿದ್ದ.

" ಸ್ವಲ್ಪ ಅಂಜಿಕೆ ಬೇಕೇಬೇಕು. ಹೊಡೆಯುಬಾರದು. ನಮ್ಮ ರಾಮು ಸಣ್ಣವ ಇದ್ದಾಗ ಹೀಂಗ ಕಾಡತಿದ್ದ. ಒಂದು ದಿವಸ ಅವನ್ನ ಕಟಿಗೆ ಮನ್ಯಾಗ ಕರಕೊಂಡು ಹೋದೆ, ' ಇಡಲ್ಯಾ ಇಲ್ಲೆ ನಿನ್ನ? ಇಲಿ ಬಂದ ಕಡಿತಾವ ನೋಡು. ಇಡಲೀ ಇಲ್ಲೀ ನಿನಗ? ಹೊರಗೆ ಹೋದರ ನೋಡು ಕಟಿಗೆ ಮನ್ಯಾಗ ಇಡತೇನಿ. ' ಅಂದಿನಿಂದ ಅವ ಹೊರಗೆ ಹೋಗುವದ್ನ ಬಿಟ್ಟ " ಸಾಳವ್ವ ತನ್ನ ಅನುಭವ ಹೇಳತಿದ್ದಳು.

* * * *

ಮಾನಪ್ಪ ಮಂಗ್ಗದ ಮೇಲೆ ಕೂತಿದ್ದ. ಬಂಗಾರಿ ಅಲ್ಲೆ ಆಡತಿದ್ದಳು. ನೂಲಿನ ಗುಂಡಿ ತಗೊಂಡು ಆಡತಿದ್ದಳು ಆದರೆ ಹಾದಿ ಮೇಲೆ ಹೋಗುವ ಚಕಡಿ ಕಡೆಗೆ ನೋಡುತಿದ್ದಳು. ಬಂಗಾರಿ ಎತ್ತ ನೋಡಿದಳು. ಬಾಗಿಲ ಕಡೆ ಹೋದಳು. ಹೊರಗೆ ಹೋದಳು ಮತ್ತೆ ದೂರ ಎಲ್ಲೊ ಹೋದಳು. ಮಾನಪ್ಪನ ಲಕ್ಷ್ಯದಾಗ ಬಂತು ಬಂಗಾರಿ ಎಲ್ಲಿ? ಹೊರಬಿದ್ದು ಅತ್ತಿತ್ತ ನೋಡಿದ. ಎಲ್ಲಿಯೂ ಕಾಣಲಿಲ್ಲ ಗಾಬರಿಗೊಂಡ. ' ಬಂಗಾರಿ, ಬಂಗಾರಿ ' ಎಂದು ಕರೆದ. ಆಕೆ ಬರಲಿಲ್ಲ ಗುಡಿಸಲದ ಉತ್ತರಕ್ಕೆ ಇದ್ದ ತಗ್ಗಿನ ನೆನಪಾಯಿತು. ಅಲ್ಲೆ ಹೋಗ್ಯಾಳೋ ಏನೊ ? ಅಲ್ಲಿ ಕೆಸರಾಗ ಬಿದ್ದಾಳೇನು ಮಾನಪ್ಪ ಬಂಗಾರ ಕಳವಾದ ದಿವಸ, ಆ ತಗ್ಗು ಕುಸಿದು ಬಿದ್ದಿತ್ತು. ಅಂದು ಅದು ತುಂಬಿತ್ತು. ಊರ ನೀರ ಎಲ್ಲ ಅಲ್ಲಿ ಬರುತ್ತಿತ್ತು. ಜವಳ ಇತ್ತು. ಮಾನಪ್ಪ ಅಂಜಿದ. ಅಷ್ಟರಾಗ ಬಂಗಾರಿ ದೂರ ಕಂಡಳು. " ಬಂಗಾರಿ, ಬಂಗಾರಿ " ಎಂದು ಮುದುಕ ಕೂಗಿದ.

"ಬಂಗಾರಿ ಲಕ್ಷ್ಯ ಇತ್ತಲಾಗ ಇದ್ದಿಲ್ಲ. ಆಕೆ ಅಡಿವಿಯಲ್ಲಿ ಹೂವು ಹರೀತ್ತಿದಳು; ಮುದುಕ, 'ಬಂಗಾರಿ ಬಂಗಾರಿ ' ಎಂದು ಅವಳನ್ನು ಎತ್ತಿ ಕೊಂಡು ಒಂದರ ಮೇಲೆ ಒಂದು ಮುದ್ದು ಇಟ್ಟನು. ಅವಳ ಗಲ್ಲ ಕೆಂಪಾ ದವು. ಬಂಗಾರಿ ಮುದುಕನ ಕಿವಿಯ ಮೇಲೆ ಹೂವಿಟ್ಟಳು. ಬಂಗಾರಿನ್ನ ಕರಕೊಂಡು ಮುದುಕ ನಿಂತ. ಆ ಸ್ಥಳ ನೋಡತಿದ್ದ. ಇಲ್ಲೆ ಬಂಗಾರಿ ತಾಯಿಯ ಶವಕ್ಕೆ ಸಂಸ್ಕಾರ ಕೊಡಲಾಗಿತ್ತು. ಅದು ಪವಿತ್ರ ಸ್ಥಳವಿತ್ತು. ಇಲ್ಲಿಯೇ ಭೂತಾಯಿಯ ತೊಡೆಯ ಮೇಲೆ ಬಂಗಾರಿ ತಾಯಿ ತನ್ನ ತಲೆ ಇಟ್ಟಿದ್ದಳು. ಬಂಗಾರಿ ಅವಳನ್ನು 'ಮಾಮಾ,' ಎಂದು ಕೂಗಿದಳು.

ನೊಲಿ ಹಾಲು ಉಣ್ಣಬೇಕೆಂದು ತಾಯಿಯನ್ನು ಎಬ್ಬಿಸುತ್ತಿದ್ದಳು. ಬಂಗಾರಿ ಬಂದು ಅಲ್ಲಿ ಕೂತಿದ್ದಳು. ಇಂದು ಅದೇ ಸ್ಥಳದಲ್ಲಿದ್ದ ಹೂಗಳನ್ನು ಕೂಡಿಸುತ್ತಿದ್ದಳು. ಆ ತಾಯಿಯ ಆತ್ಮ ಅಲ್ಲಿ ಇತ್ತೇ ? ಆ ಹೂವು ಆ ತಾಯಿಯ ಕಣ್ಣೀರಿನ ಹನಿಗಳಾಗಿದ್ದವೇ? ಮಾನಪ್ಪನ ತಲೆಯೊಳಗೆ ಎಷ್ಟೋ ವಿಚಾರ ಬಂದವು. ಅವನು ಆ ಹೂವುಗಳನ್ನು ಬಂಗಾರಿಯ ತಲೆಯಲ್ಲಿ ಹಾಕಿದ. ಬಂಗಾರಿ ವನದೇವತೆಯಂತೆ ಕಂಡಳು ಅವನು ಅವಳನ್ನು ಕರಕೊಂಡು ಮನೆಗೆ ಬಂದ.

" ಬಂಗಾರಿ, ಇನ್ನ ಮುಂದ ಹೊರಗೆ ಹೋದರೆ ನೋಡು ಆ ಇದ್ದಲಿ ಕೋಣ್ಯಾಗ ಇಡತೇನಿ ನಿನ್ನ. ಇಡಲೀ ಒಳಗ." ಎಂದು ಇದ್ದಲಿ ಕೋಣೆಯಲ್ಲಿ ಸ್ವಲ್ಪ ಹೊತ್ತು ಇಟ್ಟ. ಅವಳು ಅಳಲಿಕ್ಕೆ ಹತ್ತಿದಳು. ಅವನಿಗೆ ಕನಿಕರವೆನಿಸಿ ಹೊರಗೆ ತಂದು ಕಣ್ಣು ಒರಸಿದ ಕಾಲಿಗೆ ಕಪ್ಪು ಹತ್ತಿದ್ದು ತೊಳೆದ " ವಗು, ಇಲ್ಲ, ಇನ್ನೊನ್ಮೆ ನಿನ್ನ ಹಾಂಗ ಇಡುವದಿಲ್ಲ ಒಳಗ. ನನ್ನ ಬಂಗಾರ " ಹೀಗಂದು ಅವಳಿಗೆ ಮುದ್ದಿಟ್ಟ.

ಬಂಗಾರಿಗೆ ಆಡುವ ಸಾಮಾನುಗಳ ಕೊರತೆ ಇದ್ದಿಲ್ಲ. ಬೇಕಾದ ವಸ್ತು ನಡೆಯುತ್ತಿತ್ತು. ಮಾನಪ್ಪನ ಕತ್ರಿ ಅದರ ಮೇಲೆ ಅವಳ ಕಣ್ಣು ಯಾವಾಗಲೂ ಒಂದು ದಿವಸ ಆ ಕತ್ರಿ ತಗೊಂಡು ಹೋದಳು. ನೂಲಿನ ಗುಂಡಿ ಕತ್ತರಿಸುತ್ತಿದ್ದಳು ಏನು ಮಾಡತಾಳ ಎಂದು ನೋಡಲಿಕ್ಕೆ ಮಾನಪ್ಪ ಬಂದ. ಬಂಗಾರಿ ನೂಲಿನ ಎಳೆ ಕತ್ತರಿಸುತ್ತಿದ್ದಳು. " ನಿನಗ ಕತ್ರಿ ತಗೋಬ್ಯಾಡ ಅಂತ, ಎಷ್ಟು ಸಾರೆ ಹೇಳೀನಿ. ಕೈ ಕೊಯ್ಯಕೊಂಡಿ. ಇಡಲ್ಯಾ ಆ ಇದ್ದಲಿ ಮನ್ಯಾಗ ? " ಮಾನಪ್ಪ ಅಂದ

" ಇಡರಿ, ಮತ್ತ ನಾ ಅತ್ತು ನಿಮ್ಮನ್ನ ಒದರತೇನಿ ಅಂದರ ನೀವು ಬಂದು ಕರಕೋತೀರಿ ಕಾಲ ತೊಳಿತೀರಿ. ಇಡರಿ ಆ ಕೋಣ್ಯಾಗ " ಹುಡುಗಿ ಅಂದಿತು. ಮಾನಪ್ಪ ನಕ್ಕ. ಯಾವ ವಸ್ತುವಿನ ಅಂಜಿಕೆ ತೋರಿಸತಿದ್ದ, ಅದೇ ಹುಡುಗಿಗೆ ಸೋಜಿಗ ವಿಷಯ ಆಯಿತು. ಇನ್ನು ಅಂಜಿಕೆ ತೋರಿಸುವದೇ ಬೇಡ. ಸ್ವತಂತ್ರವಾಗಿ ಬೆಳೆಯಲಿ ಎಂದು ಅಂದುಕೊಂಡ. ಅವನು ಬಂಗಾರಿಗಾಗಿ ನಯವಾದ ಅರಿವೆ ನೇಯ್ದು. ಅದಕ್ಕೆ ಅರಿವೆ ಹೊಲೆಸಿದ. ಬಂಗಾರಿ ಎಷ್ಟು ಸುಂದರ ಕಾಣುತಿದ್ದಳು ಈ ಉಡುಪಿನಲ್ಲಿ ! ಅವಳಿಗಾಗಿ

ಅವನು ಉತ್ತಮ ಹಲ್ಲೆ ತರುವನು ಹಾಲು ಕೊಳ್ಳುವನು. ಅವಳ ಹೋಳಿಗೆಗೆ ತುಪ್ಪ ಹಚ್ಚುವನು. ಈಗ ಮಾನಪ್ಪನಲ್ಲಿ ದುಡ್ಡು ಶಿಲ್ಕು ಉಳಿಯುತ್ತಿದ್ದಿಲ್ಲ. ಮೊದಲು ಬಂಗಾರದ ನಾಣ್ಯಗಳಾಗುತ್ತಿದ್ದವು, ಆದರೆ ಈಗ ? ಮೊದಲು ಆ ದುಡ್ಡಿಗೆ ಯಾವ ಉದ್ದೇಶವು ಇರಲಿಲ್ಲ. ಆ ಉದ್ದೇಶವಿಲ್ಲದ ದುಡ್ಡು ಕೂಡುತ್ತಿತ್ತು. ಈಗ ದುಡ್ಡಿನ ವಿನಿಯೋಗವಾಗುತ್ತಿತ್ತು. ಆಗ ದುಡ್ಡಿಗಾಗಿ ದುಡ್ಡು ಇತ್ತು. ಈಗ ಬಂಗಾರಿಗಾಗಿ ದುಡ್ಡು.

ಬಂಗಾರಿ ಚಂದಪ್ಪನಂತೆ ಬೆಳೆಯುತ್ತಿದ್ದಳು ಮಾನಪ್ಪ ಅವಳನ್ನು ಕೂಡಿಸಿ ಕಥೆ ಹೇಳತಿದ್ದ. ಅವಳ ಕೂಡ ಕಣ್ಣು ಮುಚ್ಚಾಣಿಕೆ ಆಟ ಆಡತಿದ್ದ. ಮೊದಲು ಅವನ ಜೀವನಕ್ಕೆ ಅರ್ಥ ಇರಲಿಲ್ಲ ಎಲ್ಲಿ ನೋಡಿದರು ನಿರಾಶೆ ಅವನು ಅರಿವೆ ನೇಯ್ದರು ಅದೊಂದು ಯಾಂತ್ರಿಕ ಕೃತಿಯಾಗಿತ್ತು. ದುಡ್ಡು ಕೂಡುತಿತ್ತು ಅವನ್ನೆ ಅಪ್ಪಿಕೊಳ್ಳತಿದ್ದ. ಆದರೆ ಈಗ ಅವನ ಜೀವನದಲ್ಲಿ ಬೆಳಕು ಬಂದಿತು. ಪ್ರೇಮ, ಸ್ನೇಹ, ದಯೆ, ಮಾನವತೆ, ಕರ್ತವ್ಯ, ಆನಂದ ಇವುಗಳ ಬತ್ತಿದ್ದ ಝರಿ ಮತ್ತೆ ಹರಿಯಹತ್ತಿದವು. ಅವನ ಜೀವನಕ್ಕೆ ಒಂದು ಅರ್ಥ ಬಂದಿತು. ಆ ಜೀವನ ಸವಿಗೊಂಡಿತು. ಮೊದಲು ಮಾನಪ್ಪನ ಕಣ್ಣು ಭಯಾನಕವಾಗಿದ್ದವು. ಈಗ ಸ್ನೇಹಮಯವಾಗಿವೆ ಹದಿನೈದು ವರುಷ ಅವನ ಮುಖದ ಮೇಲೆ ನಗೆ ಇರಲಿಲ್ಲ. ಈಗ ಬಂಗಾರಿಯ ಕೂಡ ಆಡುತ್ತ ನಗುತಿದ್ದ ಈಗ ಮಾನಪ್ಪನ ಪುನರ್ಜನ್ಮವಾಗಿತ್ತು. ಚಿಕ್ಕ ಮಗು ಬಂಗಾರಿ ! ಆದರೆ ಅವನ ಜೀವನದಲ್ಲಿ ಅವಳು ಕ್ರಾಂತಿ ಮಾಡಿದ್ದಳು. ಇನ್ನೂ ಅವಳು ಕೈ ಹಿಡಿದು ನಡೆಯುತ್ತಿದ್ದಳು. ಮಾತಾಡಲು ಪೂರಾ ಬರತಿದ್ದಿಲ್ಲ. ಆದರೂ ತಿಳಿಯದೆ ಮುದುಕನ ಜೀವನದ ಆಧಾರವಾಗಿದ್ದಳು ಅವನ ಜೀವನ ಅವಳಿಂದ ಅರಳುತ್ತಿತ್ತು ಅವನ ಜೀವನದಲ್ಲಿ ಅವಳು ಆನಂದದ ರಸವನ್ನು ಸುರಿವುತ್ತಿದ್ದಳು. ಜಗತ್ತಿನಲ್ಲಿ ಇಂಥ ಚಮತ್ಕಾರಗಳು ಆಗುತ್ತವೆ. ಚಿಕ್ಕ ಮಗುವಿನ ಚಿಕ್ಕ ಕೈಗಳು ಸಹ ದೊಡ್ಡವರ ಉದ್ಧಾರಮಾಡಿ, ಅವರನ್ನು ವಿನಾಶದಿಂದ ಉಳಿಸುತ್ತವೆ.

ಬಂಗಾರಿ ಈಗ ಬೆಳೆಯುವ ಹುಡುಗಿ ಅವಳು ಹಗಲ್ಲೆಲ್ಲ ಸಾಳವ್ವನಲ್ಲಿ ಹೋಗುವಳು ಅಡುಗೆಯ ಆಟ ಆಡುವಳು. ಸಾಳವ್ವನ ಮಗ ರಾಮು ಅವಳಿಗೆ ಆಟ ಹಚ್ಚಿಕೊಡವನು. ಒಮ್ಮೊಮ್ಮೆ ಅವಳು ತಂದದ್ದೆಲ್ಲ ತಿಂದು

ಬಿಡುವನು. ಆಗ ಬಂಗಾರಿ ಸಿಟ್ಟು ಬೆಂಕಿಯಾಗುವ ). ಎಲ್ಲ ಆಟದ ವಸ್ತು ತೂರಿ ಬಿಡುವನು ಮತ್ತೆ ರಾಮು ಅವನ್ನೆಲ್ಲ ಕೂಡಿಸಿ ಅವಳಿಗೆ ಸಮಾಧಾನ ಹೇಳುವನು " ರಾಮು, ಯಾಕ ಆಕಿನ್ನ ಅಳಿಸೋದು ಅದು ? " ಎಂದು ಸಾಳವ್ವ ಕೇಳುವಳು. "ಹಿಂದುಗಡೆ ನಗಿಸಲಿಕ್ಕೆಂದು" ರಾಮು ಅನ್ನುವನು.

"ಹೀಗೆ ಜಗಳಾಡಬಾರದು ಅವಳು ಇನ್ನೂ ಸಣ್ಣಾಕಿ ಇದ್ದಾಳ" ಸಾಳವ್ವ ಅಂದಳು

"ನಾನೇನು ದೊಡ್ಡವನೇ ?" ಎಂದು ರಾಮು ಕೇಳುವನು.

"ರಾಮೂ ನನಗ ಹೂವ ತಂದು ಕೊಡತೀಯಾ? ಹೂ ತಂದ ಕೊಟ್ಟರ ನಾ ನಗತೇನಿ. ಇಲ್ಲಿದ್ದರ ಸಿಟ್ಟಿಗೆದ್ದು ಹೋಗತೇನಿ" ಬಂಗಾರಿ ಅನತಿದ್ದಳು.

"ತಂದು ಕೊಡತೇನಿ ಹೂವು, ನಗು" ಅವನು ಅನ್ನುವನು ಬಂಗಾರಿ ನಗುವಳು, ರಾಮು ಅವಳ ಕಣ್ಣು ಮುಚ್ಚುವನು ಹೀಗೆ ರೋಜು ನಡೆಯುತ್ತಿತ್ತು. ಒಮ್ಮೊಮ್ಮೆ ಬಂಗಾರಿ ಸಾಳವನ್ನಲ್ಲೆ ಊಟ ಮಾಡತಿದ್ದಳು ಆಗ ಮಾನಪ್ಪ ಸಿಟ್ಟಾಗತಿದ್ದ.

" ರಾಮು, ಅಂದರೇನು ಬೇರೆಯವನೇ ? ಅವನೂ ನಮ್ಮಾವ. ರಾಮೂನ ಅವ್ವನೂ ನಮ್ಮವಳು ಅಪ್ಪಾ, ಅಲ್ಲೆ ಊಟ ಮಾಡಿದರ್‍ಯಾಕ ಸಿಟ್ಟು?ನೀವು ಸಿಟ್ಟಾದರ್‍ಯಾ? ಹೋಗಬೇಡವೇ ನಾನು?" ಅವಳು ಕೇಳುವಳು

"ಯಾವಾಗಾರ ಒಮ್ಮೆ ಹೋಗಬೇಕು " ಅವನು ಅನ್ನುವನು.

"ಹಾಂಗಾರ ನಾ ಏನು ದಿನಾ ಹೋಗತೇನೇನು ?" ಬಂಗಾರಿ ಕೇಳುವಳು. ಹೀಗೆ ದಿನ ಸಾಗಿದ್ದವು. ಮಾನಪ್ಪ ಅವಳಿಗೆ ಓದಲಿಕ್ಕೆ ಬರೆಯುಲಿಕ್ಕೆ ಕಲಿಸತಿದ್ದ. ಒಂದು ದಿನ ಬಂಗಾರಿಗಾಗಿ ಒಂದು ಪುಸ್ತಕ ತಂದಿದ್ದ. ಅದನ್ನ ಅವಳ ಕೂಡ ಓದಿಕೋತ ಕೂತಿದ್ದ. ಆಗ ಸಾಳವ್ವ ಬಂದಳು

"ಮಾನಪ್ಪ, ನಿಮಗ ಓದಲಿಕ್ಕೆ ಬರತದ" ಆಶ್ಚರ್ಯದಿಂದ ಕೇಳಿದಳು.

"ನಡುವೆ ಮರೆತಿದ್ದೆ. ಹದಿನೈದು ವರುಷ ಬರಿಯಲಿಲ್ಲ. ಓದಲಿಲ್ಲ. ಆದರೆ ಈಗ ಎಲ್ಲ ನೆನಪಾಗತದ. ನನ್ನ ವಿದ್ಯಾ ತಿರಿಗಿ ಬಂತು. ಓದೋದು ಬರಿಯೋದೂ ತಿರಿಗಿ ಬಂತು. ಬಂಗಾರಿಗೆ ಕಲಿಸಬೇಕು ಎಂದು ಬಂತು. ಅಲ್ಲ ಏನ, ಬಂಗಾರಿ ? ನಾವು ಸಣ್ಣವರಿದ್ದಾಗ ಕಲಿಸುವಾಗ ನಮಗೆ ಹೊಡೆಯುತ್ತಿದ್ದರು. ಆದರೆ ನಾ ಮಾತ್ರ ಬಂಗಾರಿಗೆ ಹೊಡೆಯುವದಿಲ್ಲ ಬಂಗಾರಿ

ಬಹಳ ಬುದ್ಧಿವಂತಳು ಆಕಿಗೆ ಲಗುಲಗು ಬರತದ." ಮಾನಪ್ಪ ಹೇಳಿದ.

"ನಮ್ಮ ರಾಮನೂ ಓದತಾನ. ಆದರ ಬಡವರಿಗೆ ಕಲಿತೇನು ಮಾಡೋದದ? ಆದರೂ ಬರತಿರಬೇಕು. ಪತ್ರ ಬಂದರ ಓದಲಿಕ್ಕೆ ನೆಟ್ಟಗೆ. ಲೆಕ್ಕ ಮಾಡಲಿಕ್ಕೆ ಬರತದ. ಇಲ್ಲದಿದ್ದರ ಬಡವನ ಮೋಸ ಮಾಡು ವವರು ಬಹಳ ಮಂದಿ. ನನಗೆ ಓದಲಿಕ್ಕೆ ಬರೂದಿಲ್ಲ ರಾಮೂನ ನನಗ ಅಂತಾನ, ನೀ ಓದಲಿಕ್ಕೆ ಕಲಿ' ಎಂದು. ನಾ ಅವಗ ಅಂದೆ "ನಿನ್ನ ಹೆಣತಿ ಬಂದ ವ್ಯಾಲೆ ಆಕಿಗ ಕಲಿಸು.'' ಸಾಳವ್ವ ನಕ್ಕ ಅಂದಳು.

"ರಾಮನ ಹೆಂಡತಿ, ಅಯ್ಯ ಯವ್ವ!" ಎಂದು ಬಂಗಾರಿ ತುಟಿ ಮೇಲೆ ಬಟ್ಟ ಇಟ್ಟು ಅಂದಳು ಒಂದು ದಿನ ಬಂಗಾರಿ ಹೊರಗೆ ಹೋಗಿದ್ದಳು. ಸಂಪತರಾಯನ ವಾಡೆದ ಮೇಲಿಂದ ಹೊರಟಿದ್ದಳು ಅವಳನ್ನು ಕರೆಯ ಬೇಕು ಎಂದನಿಸಿತು ಅವನಿಗೆ. ಆದರ ಅಷ್ಟರಾಗ ಅವನ ಹೆಂಡತಿ ಇಂದು-ಮತಿ ಅಲ್ಲೆ ಬಂದು "ಏನ ನೋಡಿತೀರಿ?" ಪ್ರೇಮದಿಂದ ಕೇಳಿದಳು.

"ನೇಕಾರನ ಹುಡುಗಿಯನ್ನು" ಅವನು ಅಂದ.

"ನೇಕಾರನು ಮಾಡುವದು ಹೆಚ್ಚಿನದು ಆ ಹುಡುಗಿದ ಎಲ್ಲ ಮಾಡ ತಾನ. ಚಿಕ್ಕಂದಿನಿಂದ ಅವಳನ್ನು ಜೋಪಾನ ಮಾಡಿದ ಅವಳ ಹೇಸಿಗೆ ತಗದ. ಬೇನೆ ಬೇಸರಿಕೆ ಎಲ್ಲ ನೋಡಿಕೊಂಡ ಅವಳ ಕೂಡ ಆಡತಿದ್ದ. ಓದಲಿಕ್ಕೆ ಕಲಿಸಿದ. ಹೆಣ್ಣುಮಕ್ಕಳು ಮಾಡಲಿಕ್ಕಿಲ್ಲ ಅಷ್ಟು ಚಲೋ ಜೋಪಾನ ಮಾಡಿದ. ತಾಯಂದಿರಿಗೂ ಒಮ್ಮೊಮ್ಮೆ ಬೇಸರಾಗಬಹುದು. ಆದರೆ ಮಾನಪ್ಪ ಆನಂದದಿಂದ ಎಲ್ಲ ಮಾಡಿದ ಹ್ಯಾಂಗ ಸುಂದರ ಕಾಣಿಸ ತಾಳ ಈ ಹುಡುಗಿ. ಏನು ನೋಡತಾಳ ಈಕಿ ?"

"ಅವಳು ನಮ್ಮ ತೋಟದಲ್ಲಿಯ ಹೂವುಗಳನ್ನು ನೋಡುತ್ತಿದ್ದಾಳೆ."

"ಹೆರಳಲ್ಲಿ ಹಾಕಲಿಕ್ಕೆ ಬೇಕಾಗಿರಬೇಕು"

"ನಡೆ ನಾವು ಅವಳಿಗೆ ಹೂ ಕೊಡೋಣಂತ"

"ಆಳಿಗೆ ಹೇಳೋಣ"

ಅಷ್ಟರಾಗ ಯಾವನೋ ಆಳು ಒದರಿದ್ದರಿಂದ ಬಂಗಾರಿ ಓಡಿ ಹೋಗಿದ್ದಳು ಬಂಗಾರಿ ಗಾಬರಿಗೊಂಡು ಓಡಿಹೋದಳು. ಮನೆಗೆ ಬರುವದ ರೊಳಗಾಗಿ ಗಾಬರಿಯಾಗಿ ಬೆವರುಗೊಂಡಿದ್ದಳು. ಮಾನಪ್ಪ ಅಡಗಿ ಮಾಡ

ತ್ತಿದ್ದ ಬಂಗಾರಿ ಅಳತಿದ್ದಳು "ಏನಾಯಿತು ಮಗು ? ಅವನು ಪ್ರೇಮ ದಿಂದ ಕೇಳಿದ.

" ಅಪ್ಪಾ, ನಮ್ಮ ಮನಿ ಮುಂದ ತೋಟ ಮಾಡೋಣು. ಸಣ್ಣದ ಇರುವಲ್ಲದು. ಆದರೆ ಅಲ್ಲೆ ನೀವು ಕೆಲಸ ಮಾಡುವ ಹಾಗಿಲ್ಲ. ನಾನು, ರಾಮೂ ಇಬ್ಬರೂ ದುಡಿಯುವೆವು. ನಾವು ಅಗಿದು, ಅಗಿ ಹಚ್ಚಿ, ನೀರು ಹಾಕುವೆವು. ರಾಮೂ ಇದಕ್ಕೆ ಒಪ್ಪ್ಯಾನ. ನಿಮ್ಮ ಒಪ್ಪಿಗೆಯೇ ಇದಕ್ಕೆ ? ಆದರೆ ಮಾಡುವದೆಲ್ಲಿ ? ನಮ್ಮದು ಜಾಗ ಇಲ್ಲ. ಅತ್ತಲಾಗ ಎಲ್ಲಾ ರಗಡ ಜಾಗ ಬಿದ್ದದ ಆ ತೆಗ್ಗಿನ ಹತ್ತರ ಅದ. ನಮಗ ತಗೊಳ್ಳಲಿಕ್ಕೆ ಬರಲಿಕ್ಕಿಲ್ಲವೇ ? ಅದಕ್ಕೆ ಎಷ್ಟು ದುಡ್ಡು ಬೀಳಬಹುದು ?" ಬಂಗಾರಿ ಮಾನಪ್ಪನ ಕೊರಳಲ್ಲಿ ಬಿದ್ದು ಕೇಳಿದಳು.

"ತಗೊಳ್ಳುವ, ಮಗು ನಾವು ಈ ಜಾಗವನ್ನು. ಬಂಗಾರಿ ಹೆರಳೊಳಗ ದಿನ ಹೊಸ ಹೂವು, ಮಾಲೆ ಹಾಕುವ" ಮಾನಪ್ಪ ನಕ್ಕೋತ ಅಂದನು

"ರಾಮೂನ ತಾಯಿಗೂ ಪೂಜೆಗೆ ಹೂವಾಗುವವು. ನಾನೂ ಹೂ ತೆಗೆದು ಮಗ್ಗದ ಹತ್ತಿರ ಇದ್ದ ನಿಮ್ಮ ಕಿಡಕಿಯಲ್ಲಿ ಇಡುವೆನು ನಿಮಗೂ ಸುಗಂಧ ಬರುವದು ಆದರ ನೀವು ತೋಟದಾಗ ಕೆಲಸ ಮಾಡಬಾರದು, ನೀವು ಹ್ಯಾಂಗ ತೋಟ ಮಾಡಬೇಕು ಹೇಳಿರಿ ನಾನು, ರಾಮು ಇಬ್ಬರೂ ಕೆಲಸ ಮಾಡಾವರು " ಅವಳು ಅಂದಳು

"ಕೆಲಸ ಮಾಡೊ ಮುಂದ ಜಗಳಾಡತೀರಿ" ಅವನು ನಕ್ಕು ಅಂದನು.

"ಈಗೇನ ಜಗಳಾಡಲಿಕ್ಕೆ ಸಣ್ಣವರೇನು ನಾವು?" ಅವಳು ಕೇಳಿದಳು.

"ಅಬ್ಬ! ಈಗೇನು ದೊಡ್ಡವರು ಆದರ್‍ಯಾ ನೀವು?" ಮಾನಪ್ಪ ಅಂದ.

"ಅಪ್ಪ, ನಿಜವಾಗಿ ನಾನು ಈಗ ದೊಡ್ಡಾಕಿ ಆಗೇನಿ" ಅವಳು ಅಂದಳು

ನಿಜವಾಗಿ ಈಗ ಬಂಗಾರಿ ದೊಡ್ಡವಳಾಗಿದ್ದಳು. ರಾಮೂನೂ ದೊಡ್ಡವ ಆಗಿದ್ದ. ಒಂದು ದಿನ ಅವರಿಬ್ಬರೂ ಕುಳಿತುಕೊಂಡಾಗ–

"ಬಂಗಾರಿ ನಿನಗೆ ಒಂದು ಮಾತು ಕೇಳಲ್ಯಾ? "

"ಕೇಳು, ಅದಕ್ಯಾಗ ನನ್ನ ಪರವಾನಗಿ ? "

"ನೀ ಸಿಟ್ಟಿಗೇಳಬಹುದು ? "

"ನಾ ಏನು ಸಣ್ಣಾಕೀನ ಸಿಟ್ಟಿಗೇಳಲಿಕ್ಕೆ? ಆಟದಾಗ ಸಿಟ್ಟಿಗೇಳತಿದ್ದೆ, ಆಗ ಸಣ್ಣಾಕಿ ಇದ್ದೆ."

"ಹೌದು, ಈಗ ದೊಡ್ಡಾಕಿ ಆಗೀದಿ."

"ನೀನೂ ದೊಡ್ಡಾವ ಆಗೀದಿ."

"ಅದಕ ಕೇಳಬೇಕು ಅಂತೇನಿ."

"ನೀ ಕೇಳೋದು ದೊಡ್ಡವರಾದಾಗ ಕೇಳೂ ಮಾತ ಏನು?"

"ಹೌದು."

"ಹಾಂಗಾರ ಕೇಳು"

"ನೀ ನನ್ನನ್ನು ಮದುವೆ ಆಗತೀಯಾ? ನಾವಿಬ್ಬರೂ ಗಂಡಾ ಹೇಣತಿ ಆಗಿ ಸಂಸಾರ ಮಾಡೋಣ."

"ಹಾಂಗಾದರ ಮಾನಪ್ಪಗ ಯಾರು? ಅವರು ಈಗ ಮುದುಕ ಆಗ್ಯಾರ. ಅವರನ್ನು ಬಿಟ್ಟು ಹೇಗೆ ಹೋಗಲಿ? ಅವರ ನನ್ನ ಜೋಪಾನ ಮಾಡಿ ದೊಡ್ಡಾಕಿನ್ನ ಮಾಡ್ಯಾರ ಮುದುಕನಾಗಿ ಒಬ್ಬರ ಇರಬೇಕ? ಅವರನ್ನು ಬಿಡೋದು ಅಂದರ ಕೃತಘ್ನತೆಯಾಗುವದು."

"ಅವರನ್ನು ಬಿಡು ಅಂತ ಯಾರಂತಾರ? ನಾವೆಲ್ಲರೂ ಕೂಡಿ ಇರುವ. ಮಾನಪ್ಪ ಇನ್ನ ಆರಾಮು ತಗೊಳ್ಳಿ"

"ಹೀಗಾಗಬಹುದೇ?"

"ಆದರಾಗ ಏನದ? ಆದರೆ ನನ್ನ ಮೇಲೆ ನಿನ್ನ ಪ್ರೀತಿ ಅದೆ ಏನು?"

"ಇಲ್ಲದ ಏನು? ನಿನ್ನ ಹೊರ್ತು ನನಗ ಸಮಾಧಾನವೆನಿಸುವದಿಲ್ಲ. ನೀ ಬಹಳ ಚಲೋ ಇದ್ದೀದಿ."

"ನಿನ್ನ ಮೇಲೆ ನನ್ನದು ಜೀವ ಅದೆ"

"ನಾನು ಅಪ್ಪನಿಗೆ ಕೇಳುವೆ ಅವರ ಏನಂತಾರ ನೋಡೋಣು."

"ಕೇಳು. ಅವರ ಆನಂದವೇ ನಮ್ಮ ಆನಂದವು"

ರಾಮು, ಬಂಗಾರಿ ಹೊರಟು ಹೋದರು ರಾಮೂ ಕೆಲಸಕ್ಕೆ ಹೋದನು. ಬಂಗಾರಿ ಮನೆಗೆ ಬಂದಳು. ಆದಿನ ಸಂಜೆ ಮಾನಪ್ಪ ಬಂಗಾರಿ ಕೈಹಿಡಿದು ಅಡ್ಡಾಡಲಿಕ್ಕೆ ಹೋಗಿದ್ದ ಸೂರ್ಯ ಅದೇ ಮುಣುಗತಿದ್ದ. ಪಶ್ಚಿಮದಲ್ಲಿ ಸುಂದರ ನೋಟ ಕಾಣುತಿತ್ತು. ಬಂಗಾರಿಯ ಮುಖದ ಮೇಲೂ ನೂರಾರು ಬಣ್ಣದ ಆಟ ನಡೆದಿತ್ತು.

"ಬಂಗಾರಿ, ಎಷ್ಟು ಚಂದ ಕಾಣತಿ ನೀನು ?" ಮಾನಪ್ಪ ಅಂದ.

"ಹಾಂಗ ನಾ ಯಾವಾಗಲೂ ಚಂದ ಕಾಣತೇನಿ."

"ನನಗ ಅಲ್ಲ ಎಲ್ಲಾರಿಗೂ ಚಂದ ಕಾಣತಿ. ಆದರೆ ನಿನ್ನ ಈ ಚೆಲುವು ಯಾರ ಕೈಯಲ್ಲಿ ಬೀಳುವದೋ ? ಏನೋ ? ಬಂಗಾರಿ, ನೀನು ದೊಡ್ಡಾಕಿ ಆದಿ ಇನ್ನು ನಿನ್ನ ಮದುವೆಯಾಗಬೇಕು. ನಾನು ಮುದುಕ ಆದೆ. ನಿನ್ನ ಕ್ಕೆ ಯೋಗ್ಯ ತರುಣನ ಕೈಯಲ್ಲಿ ಕೊಡಬೇಕು. ಅಂದರ ನನ್ನ ಕರ್ತವ್ಯ ಮುಗಿದಂತೆ ಆಗುವದು."

"ಅಪ್ಪಾ !" "ನಿಮಗ ಒಂದು ಮಾತು ಕೇಳಲ್ಯಾ ?"

"ಬಂಗಾರಿ, ಏನು ? ಕೇಳು, ಮಗು."

"ರಾಮೂ ನನಗೆ ಕೇಳತಿದ್ದ"

"ಏನು ಕೇಳತಿದ್ದ ?"

"ನೀನು ನನ್ನ ಹೆಂಡತಿಯಾಗತಿ ಏನು ಎಂದು"

"ನೀ ಏನಂದಿ ಮಗು ?"

"ಅಪ್ಪನಿಗೆ ಕೇಳುವೆ ಅಂದೆ"

"ಅಂ ಹಾ, ನೀವಿಬ್ಬರೂ ಮಾತು ಮುಗಿಸಿ ಬಿಟ್ಟರಿ ಹಾಂಗಾರ. ನನ್ನ ಚಿಂತೆ ಕಡಿಮೆಯಾಯಿತು."

"ಅಪ್ಪಾ, ರಾಮೂ ಒಳ್ಳೆಯವ. ನಿಮ್ಮ ಮನಸಿಗೆ ಬರಲಿಲ್ಲವೇ ?"

"ಇಡೀ ಊರಿಗೆ ಬೇಕಾದವ ಅವ. ಎಷ್ಟು ಉದಾರ ! ಆಲಸ್ಯ ಅಂಬೋದ ಗೊತ್ತಿಲ್ಲ ಅವಗ ನಿಜವಾಗಿ ಚಲೋ ಇದ್ದಾನ ಅವ"

ಮಾನಪ್ಪನ ಕಣ್ಣಲ್ಲಿ ನೀರು ನಿಂತವು ಅವನು ಬಂಗಾರಿ ಕೈಹಿಡಿದ. ಆ ಕೈಮೇಲೆ ಕಣ್ಣೀರಿನ ಹನಿ ಬಿದ್ದವು. ಆ ಕಣ್ಣೀರಲ್ಲಿ ಎಷ್ಟು ಅರ್ಥವು ತುಂಬಿತ್ತು !

"ಬಂಗಾರಿ, ಇವತ್ತ ನನಗ ಎಲ್ಲಾ ನೆನಪಾಗತದ. ನನ್ನ ಮತ್ತು ನಿನ್ನ ಆಯುಷ್ಯ ನನ್ನ ಕಣ್ಣೆದುರಿಗೆ ಬರತದ. ರಾಯಗಾವದಲ್ಲಿ ನಾನು ಒಬ್ಬಂಟಿಗನಾಗಿದ್ದೆ. ಎಂದೂ ನಗಲಿಲ್ಲ. ಯಾರ ಕೂಡ ಮಾತಾಡಲಿಲ್ಲ. ಜೀವನ ಹೇಗೋ ಸಾಗಿತ್ತು. ಆದರಲ್ಲಿ ರಸವಿದ್ದಿಲ್ಲ. ಇಡೀ ದಿವಸ ನೇಯುತ್ತ ಕೂಡತ್ತಿದ್ದೆ. ಬಂದ ದುಡ್ಡನ್ನೆಲ್ಲ ಕೂಡಿಹಾಕತಿದ್ದೆ. ಎರಡು ಚೀಲ ಬಂಗಾರ

ನಾಣ್ಯ ತುಂಬಿದವು ಅವೇ ನನ್ನ ಜೀವನವಾಗಿದ್ದವು. ಆದರೆ ಆ ನಾಣ್ಯಗಳು ಕಳವಾಗಿ ಹೋದವು ಮತ್ತು ನೀನು ನನಗೆ ಸಿಕ್ಕಿ. ಒಂದು ದಿನ ನಸುಕಿನಲ್ಲಿ ನೀನು ನನ್ನ ಗುಡಿಸಲದಲ್ಲಿ ಬಂದಿ. ನಿನ್ನ ತಾಯಿ ಈ ಗುಡಿಸಲ ಬಿಟ್ಟು ಕೆಲವು ಅಂತರದ ಮೇಲೆ ಸತ್ತು ಬಿದ್ದಿದ್ದಳು. ನಾನು ನಿನ್ನನ್ನು ನನ್ನವಳನ್ನಾಗಿ ಮಾಡಿಕೊಂಡೆ. ನನ್ನ ಜೀವನದಲ್ಲಿ ನೀನು ಆನಂದವನ್ನು ತಂದಿ ಹದಿನೈದು ವರ್ಷ ಜೀವನದ ಝರಿಗಳೆಲ್ಲ ಬತ್ತಿಹೋಗಿದ್ದವು. ಮತ್ತೆ ನಗಲಿಕ್ಕೆ ಕಲಿತ್ತಿದೆ. ನೀನು ನನ್ನ ಜೀವನವನ್ನು ಕೃತಾರ್ಥ ಮಾಡಿದಿ. ಏತಕ್ಕಾಗಿ ಬದುಕಬೇಕು ಎಂಬುದು ತಿಳಿಯಿತು. ಬಂಗಾರಿ, ನಿನ್ನಿಂದ ಜೀವನದಲ್ಲಿ ಕ್ರಾಂತಿಯಾಯಿತು. ಅದರ ಅರಿವು ನಿನಗೆ ಇಲ್ಲ. ನೀನು ನನ್ನನ್ನು ಉದ್ಧರಿಸಿದಿ. ನಿನ್ನ ತೊದಲು ನುಡಿ, ನಿನ್ನ ನಗು, ನಿನ್ನ ಅಳುವು ನನ್ನ ಒಣಗಿದ ಜೀವನ ಕಲಿಕೆಯನ್ನು ಅರಳಿಸಿದವು. ಈಗ ನೀನು ದೊಡ್ಡವಳಾಗಿದ್ದಿ ನಿನ್ನ ಇದುರು ಹೊಸ ಮಾರ್ಗಗಳಿವೆ ಸಂಸಾರದ ಹೊಸ ಕನಸು ಕಾಣುವಿ. ಹೋಗು ಬಂಗಾರಿ, ನಿನಗೆ ಯೋಗ್ಯವಿದ್ದ ತರುಣನೊಡನೆ ಸಂಸಾರ ಮಾಡು. ನಾನು ಮತ್ತೆ ಒಬ್ಬಂಟಿಗನಾಗಿ ಇರುವೆ. ನನಗಾಗಿ ನಿನ್ನ ಉಸಿರುಗಟ್ಟುವದು ಬೇಡ."

ಮುದುಕನಿಗೆ ಮಾತನಾಡುವದಾಗಲಿಲ್ಲ. ಕಣ್ಣೀರು ಸುರಿಯಹತ್ತಿದವು. "ಅಪ್ಪಾ, ಅಳಬೇಡಿರಿ. ನನ್ನ ಮೇಲೆ ಎಷ್ಟು ಪ್ರೇಮ! ಎಷ್ಟು ಜಾಗ್ರತೆಯಿಂದ ನನ್ನನ್ನು ಜೋಪಾನ ಮಾಡಿದಿರಿ. ನನಗ್ಯಾರು ಇದ್ದರು? ನನಗೆ ನೀವೇ ತಾಯಿ ತಂದೆಯಾದಿರಿ. ಈಗ ನೀವೇ ನನಗೆ ಯೋಗ್ಯ ಗಂಡನನ್ನು ಹುಡುಕಿ ಕೊಡಿರಿ. ರಾಮೂ ಚಲೋ ಇದ್ದಾನೆ ಅಪ್ಪಾ, ನಾವು ನಿಮ್ಮನ್ನು ಬಿಟ್ಟು ಇರುವದಿಲ್ಲ. ನಾವೆಲ್ಲರೂ ಕೂಡಿ ಇರುವಾ. ರಾಮೂ. ನಾನು ದುಡಿಯು ವೆವು. ನೀವು ಆರಾಮ ತಗೊಳ್ಳಿರಿ ನೀವು ನಮ್ಮನ್ನು ಹರಸುವಿರಿ ಅಲ್ಲವೇ ? ನಿಮ್ಮನ್ನು ಬಿಟ್ಟು ನಾನು ಹೇಗೆ ಇರಲಿ ? ನಾವೆಲ್ಲರು ಕೂಡಿ ಇರುವ."

"ಎಳ್ಳೀದು ಕೂಡಿ ಇರುವ." ಮಾನಪ್ಪ ಅಂದ.

ಇಬ್ಬರು ಮನೆಗೆ ತಿರುಗಿದರು. ಮಾನಪ್ಪನ ಕೈ ಬಂಗಾರಿ ಹಿಡಿದಿದ್ದಳು.

# ಪ್ರಕರಣ ೭

## ಸತ್ಯಕ್ಕೆ ಸಾವಿಲ್ಲ

"ಅಪ್ಪಾ, ತೋಟಕ್ಕಾಗಿ ಜಾಗಾ ತಗೋತೀರಲ್ಲ? ಎಂದು ತೆಗೋತೀರಿ?" ಬಂಗಾರಿ ಕೇಳಿದಳು.

"ಅದೆ ಪ್ರಯತ್ನದಲ್ಲಿದ್ದೇನೆ, ಮಗು" ಮಾನಪ್ಪ ಅಂದ.

ಮಾನಪ್ಪ ಅದೇ ಉದ್ಯೋಗದಲ್ಲಿದ್ದ. ತಮ್ಮ ಗುಡಿಸಲ ಹತ್ತರವೇ ಜಾಗ ನೋಡತಿದ್ದ. ಬಂಗಾರಿಯ ತಾಯಿ ಸತ್ತ ಸ್ಥಳವನ್ನು ಮಧ್ಯ ಬಿಂದುವೆಂದು ಕಲ್ಪಿಸಿ, ಅದರ ಸುತ್ತಲು ಸುಂದರ ತೋಟವಾಗಬೇಕೆಂಬ ಒಂದು ಸುಂದರ ವಿಚಾರ ಅವನ ಮನಸಿನಲ್ಲಿ ಬಂದಿತ್ತು. ಆ ಮೂರುವರೆ ಮೊಳದ ಸ್ಥಳವನ್ನು ನಟ್ಟನಡುವೆ ಇಡಬೇಕೆಂದು ಮಾಡಿದ್ದ. ಅದರ ಸ ತ್ತಲು ಹೂದೋಟ ಮಾಡಬೇಕು ಬಂಗಾರಿಯು ತಾಯಿಯ ಸಮಾಧಿಯೇ ಅದೇ ಎಂದು ನೇಕಾರನು ಭಾವಿಸಿದ್ದನು. ಹೀಗೆ ಅವನ ತಲೆಯಲ್ಲಿ ವಿಚಾರ ಸುಳಿದಾಡುತ್ತಿದ್ದವು.

ಮಾನಪ್ಪ ಆ ಜಾಗಾ ತಗೊಂಡ ಅದು ಪಡಭೂಮಿ ಇತ್ತು. ಅದ-ಕೇನು ಬಹಳ ಬೆಲೆ ಬೀಳಲಿಲ್ಲ ತೀರ ಕಡಿಮೆ ಹಣಕ್ಕೆ ಅದು ನೇಕಾರನಿಗೆ ಸಿಗುವಂತೆ ಸಂಪತರಾಯರು ಪ್ರಯತ್ನ ಮಾಡಿದರು. ಸಂಪತರಾಯರಿಗೆ ಬಂಗಾರಿಯೆಂದರೆ ಜೀವ. ಅವರು ನಡುನಡುವೆ ಅವಳಿಗಾಗಿ ಎಂದು ಮಾನಪ್ಪನ ಕಡೆ ಹಣ ಕಳುಹಿಸುತ್ತಿದ್ದರು.

ಆ ಭೂಮಿಯ ಸುತ್ತು ಕಲ್ಲವಡ್ಡು ಹಾಕಿಕೊಡಬೇಕೆಂದು ಸಂಪತ ರಾಯರು ಯೋಚಿಸಿದರು ಆ ಭೂಮಿಯ ಹತ್ತಿರ ಕಲ್ಲಿನ ಕಣಿ ಇತ್ತು ಕಲ್ಲು ತೆಗೆದು ತೆಗೆದು ಅದು ತಗ್ಗಾಗಿತ್ತು. ಆಳು ಕೆಲಸ ಮಾಡಹತ್ತಿದವು. ಅಲ್ಲಿ ಇದ್ದ ಜಹಳನ್ನು ತುಂಬುವ ಕೆಲಸ ನಡೆಯಿತು. ಮಾನಪ್ಪನ ತೋಟದ ಹತ್ತರ ಹೊಲಸ ಬೇಡ. ಊರ ಗಟಾರ ನೀರು ಅಲ್ಲಿ ಬರವದು ಬೇಡ ಎಂದು ಸಂಪತರಾಯರು ವಿಚಾರ ಮಾಡಿದ್ದರು

ಸಂಪತರಾಯನ ಆಳು ಕೆಲಸ ಮಾಡತಿದ್ದರು ಅವರಿಗೆಲ್ಲ ಆಶ್ಚರ್ಯ ವಾಯಿತು. ಅಗಿಯುವಾಗ ಏನೋ ಸಿಕ್ಕಿತು. ಏನದು ? ಚರ್ಮದ ಎರಡು ಚೀಲ ! ಬಂಗಾರ ನಾಣ್ಯದಿಂದ ತುಂಬಿದ ಚೀಲ ! ಅದರ ಹತ್ತಿರ ಬಂಗಾರದ ಹಿಡಿಕೆಯ ಸಂಪತರಾಯರ ಚಬಕವೂ ಸಿಕ್ಕಿತು. ಅಲ್ಲಿ ಯಾವನೋ ಒಬ್ಬ ಮನುಷ್ಯನು ಹುಗಿದು ಬಿದ್ದಿರಬೇಕು. ಅಲ್ಲಿ ಮನುಷ್ಯರ ಎಲುಬು ಸಿಕ್ಕವು. ಯಾರವನು ? ಅಲ್ಲಿ ಒಂದು ಉಂಗರವೂ ಸಿಕ್ಕಿತು. ಯಾರದು ? ಅದರ ಮೇಲೆ ಶಕಸೇನ ಎಂಬ ಹೆಸರಿತ್ತು ! ಶಕಸೇನ, ಸಂಪತರಾಯರ ತಮ್ಮ ! ಅವನೇ ಕಳವು ಮಾಡಿದ್ದನೋ ? ಏನು ಆಶ್ಚರ್ಯ ! ಹದಿನೈದು ವರುಷದ ಮೇಲೆ ಸತ್ಯವು ಹೊರಬಿದ್ದಿತು ಊರ ಜನರೆಲ್ಲ ಆ ತಗ್ಗಿನ ಕಡೆ ಓಡುತ್ತ ಹೋದರು. ಮಾನಪ್ಪ, ಬಂಗಾರಿ, ಸಾಳವ್ವ, ರಾಮೂ ಎಲ್ಲರೂ ಹೋದರು.

"ನನ್ನ ಬಂಗಾರ, ಕಷ್ಟದಿಂದ ಗಳಿಸಿದ ಬಂಗಾರ. ಆದರೆ ನನ ಈ ಬಂಗಾರಿ ಎದುರಿಗೆ ಈ ಬಂಗಾರದ ಬೆಲೆ ಏನು ? ಬಂಗಾರಿ ಮದುವೆಗೆ ಬಂತು ಈ ಬಂಗಾರ " ಮಾನಪ್ಪ ಅಂದನು.

"ಆದರೆ ದಿಗಂಬರರಾಯರ ಮಗ ಇಲ್ಲಿ ಬಂದೇಕೆ ಬಿದ್ದನು ?"

"ಆ ದಿವಸ ಆಣೆಕಲ್ಲಿನ ಮಳೆ ಬೀಳತಿತ್ತು. ಅದರ ಹೊಡೆತ ಬಿದ್ದಿರಬೇಕು. ಕತ್ತಲಲ್ಲಿ ಈ ತಗ್ಗು ಕಂಡಿಲ್ಲ. ಮೇಲಿಂದ ಆಣೆಕಲ್ಲಿನ ಹೊಡೆತ, ಕೆಳಗೆ ಕಲ್ಲಿನ ಪೆಟ್ಟು. ರಾತ್ರಿ ಅಂತೂ ಮಣ್ಣು ಕುಸಿದುಬಿತ್ತು. ಹೀಗಾಗಿ ಶಕಸೇನನು ಹುಗಿದು ಬಿದ್ದ. ಊರ ಹೊಲಸು ಹರಿದು ಬಂದು ಅದರಲ್ಲಿ ಒಟ್ಟಿ ಬಿಟ್ಟಿತು ಸೃಷ್ಟಿಯೇ ಶಕಸೇನನಿಗೆ ಮಣ್ಣು ಕೊಟ್ಟಿತು"

"ಮತ್ತೆ ಈ ಚಬಕ ?"

"ಅವತ್ತ ಅವನು ಕುದುರಿ ಮಾರಲಿಕ್ಕೆ ಹೋಗಿದ್ದ. ಅತ್ತ ಕುದುರೆ ಸತ್ತು ಬಿದ್ದಿತ್ತು. ದುಡ್ಡಿಗಾಗಿ ಬಂದು ಕಳವು ಮಾಡಿರಬೇಕು. ಆಗ ಅವನ ಕೈಯಲ್ಲಿ ಈ ಚಬಕ ಇದ್ದಿರಬೇಕು ಆದರೆ ದೇವರ ಯೋಜನೆ ಬೇರೆ ಇತ್ತು"

"ಇಂಥ ದೊಡ್ಡ ಮನೆತನದಲ್ಲಿ ಇಂಥವನು ಹೇಗೆ ಹುಟ್ಟಿದನು ?"

"ಜಗತ್ತಿನಲ್ಲಿ ಇಂಥ ಚಮತ್ಕಾರಗಳು ಅನೇಕ ಸಾರೆ ಕಂಡುಬರುತ್ತವೆ".

ಮುದುಕನ ದುಡ್ಡು ಸಿಕ್ಕಿತು ಬಹಳ ನೆಟ್ಟಗಾಯಿತು; ಇನ್ನು ಮೇಲೆ

ಮಿಡಿಯುವದು ಬೇಡ. ಮಾನಪ್ಪನ ಪ್ರಾಮಾಣಿಕತನ, ದುಡಿತ ಮತ್ತು ಔದಾರ್ಯಕ್ಕೆ ತಕ್ಕ ಇನಾಮನ್ನು ದೇವರು ಕೊಟ್ಟ." ಜನರು ಈ ರೀತಿ ಮಾತನಾಡುತ್ತಿದ್ದರು.

ಅಷ್ಟರಲ್ಲಿ ಸಂಪತರಾಯರು ಅಲ್ಲಿಗೆ ಬಂದರು. ಜನ ಬಾಜುಕ್ಕೆ ಸರಿಯಿತು. ಅವನು ಅಮೃತ ಆ ಶರೀರವನ್ನು ನೋಡಿದನು ! ಬೇರೆ ವಸ್ತುಗಳನ್ನು ನೋಡಿದನು. ಅವರು ಗಂಭೀರರಾಗಿ ನಿಂತರು

“ ನನ್ನ ತಮ್ಮ ! ದೇವರು ಅವನನ್ನು ಕ್ಷಮಿಸಲಿ. ಮಾನಪ್ಪ, ನೀನೂ ಅವನನ್ನು ಕ್ಷಮಿಸರಿ. ” ಸಂಪತರಾಯರು ದುಃಖದಿಂದ ಅಂದರು.

ಸಂಪತರಾಯರು ತಮ್ಮನ ಅವಶೇಷಕ್ಕೆ ಅಗ್ನಿ ಸಂಸ್ಕಾರ ಮಾಡಿದರು ಜನ ತಮ್ಮ ತಮ್ಮ ಮನೆಗೆ ತೆರಳಿದರು. ಊರಲ್ಲಿ ನಡೆದ ಈ ಮಾತು ಇಂದುಮತಿ ಕಿವಿಗೆ ಬಿದ್ದವು. ಆದರೆ ನಿಜ ಹಕಿಕತ್ತು ಅವಳಿಗೆ ಪೂರ್ಣವಾಗಿ ತಿಳಿಯಲಿಲ್ಲ. ಸಂಪತರಾಯರು ಬಂದು ತಮ್ಮ ಕೋಣೆಯಲ್ಲಿ ಖಿನ್ನ ಮುಖರಾಗಿ ಕೂತರು. “ ಏನು ಗಡಿಬಿಡಿ ಇದು ? ನಿಮ್ಮ ಮುಖವೇಕೆ ಬಾಡಿದೆ ? ಹೇಳಿರಲ್ಲ ನನಗೆ. ” ಇಂದುಮತಿ ಆಸ್ಥೆಯಿಂದ ಕೇಳಿದಳು

“ ಏನು ಹೇಳಲಿ ? ನೇಕಾರ ಮಾನಪ್ಪನ ಕಳವಾಗಿ ಹೋದ ಬಂಗಾರ ನನ್ನ ತಮ್ಮ ಕದ್ದಿದ್ದ ಹದಿನೈದು ವರ್ಷಗಳಾದ ಮೇಲೆ ಆ ಸತ್ಯ ಈಗ ಹೊರಬಿದ್ದಿತು. ನಿನ್ನ ಗಂಡನ ತಮ್ಮ ಕಳ್ಳ. ಕಳ್ಳನ ಅಣ್ಣನ ಕೂಡ ನಿನ್ನ ಮದುವೆಯಾಯಿತು. ನನ್ನಿಂದ ನಿನಗ ಕುಂದು. ನಿನ್ನ ತವರುಮನೆ ದೊಡ್ಡದು. ನಿನ್ನ ಕುಲ ದೊಡ್ಡದು. ಇನ್ನು ಮುಂದೆ ನೀನು ನನ್ನ ಕಡೆ ಆದರದಿಂದ ನೋಡಲಾರಿ. ನಾನೇನು ಮಾಡಲಿ ? ” ಹೀಗಂದು ಸಂಪತರಾಯನು ಹತಾಶನಾಗಿ ನೋಡಹತ್ತಿದನು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

ಆ ಮೇಲೆ ಇಂದುಮತಿಯು ಗಂಡನ ಎರಡೂ ಕೈಗಳನ್ನು ತನ್ನ ಕೈಯಲ್ಲಿ ಹಿಡಿದು ಅಂದಳು “ ನೀವೇನು ಮನಸಿಗೆ ಹಚ್ಚಿಕೊಳ್ಳಬೇಡರಿ. ನಿಮ್ಮ ತಮ್ಮ ಹಾಗಾದರೆ ಅದರಲ್ಲಿ ನಿಮ್ಮದೇನು ದೋಷ ? ಮನೆತನಕ್ಕೆ ಕುಂದು ಬರುತ್ತದೆ, ನಿಜ. ಆದರೆ ಅದಕ್ಕೇನು ಮಾಡುವದು ? ಮಾವಂದಿರು

ಈಗ ಇಲ್ಲ, ಇದೊಂದು ಒಳ್ಳೆಯ ಮಾತೇ. ಇಲ್ಲದಿದ್ದರೆ ಅವರ ಮನಸಿಗೆ ಬಹಳ ವ್ಯಥೆಯಾಗುತ್ತಿತ್ತು ನಾನು ನಿಮ್ಮೊಡನೆ ಯಾವಾಗಲೂ ಭಕ್ತಿ ಪ್ರೇಮದಿಂದಲೆ ಬಾಳುವೆನು. ಜಗತ್ತಿನ ಕೂಡ ನನಗೇನು ಮಾಡುವದಿದೆ? ನೀನೇ ನನ್ನ ಸರ್ವಸ್ವ ನೀವು ನಿರ್ಮಲರು. ನಿಷ್ಪಾಪರಿದ್ದರಾಯಿತು ನೀವು ನಿಷ್ಕಲಂಕರಿದ್ದರಾಯಿತು. ಯಾಕೆ? ಹೀಗೇಕೆ ಮುಖ ಕಪ್ಪು ಇಟ್ಟಿದೆ? ಇಷ್ಟು ಮನಸಿಗೆ ಹಚ್ಚಿಕೊಳ್ಳಬೇಡಿರಿ. ತಮ್ಮನಿಗೆ ಅಪಘಾತದ ಮರಣ ಬಂದದ್ದು ನೋಡಿ ಕೆಟ್ಟೆನಿಸಿರಬೇಕು ನಿಮಗೆ. ಆದರೆ ಅದಕ್ಕೇನು ಉಪಾಯ?

ಸ್ವಲ್ಪೊತ್ತು ಯಾರೂ ಮಾತನಾಡಲಿಲ್ಲ

ಸಂಪತರಾಯನು ಗಂಭೀರವಾಗಿ ಅಂದನು. "ಇಂದೂ, ನಿನಗೆ ಇನ್ನೊಂದು ಮಾತು ಹೇಳುವದದೆ ಸತ್ಯವು ಒಂದಿಲ್ಲೊಂದು ದಿನ ಹೊರಗೆ ಬಿದ್ದೇ ಬೀಳುತ್ತದೆ. ನಾನೇ ನಿನಗೆ ಇದ್ದದ್ದು ಹೇಳಿಬಿಡುತ್ತೇನೆ ಹೇಳಲ್ಯಾ?"

"ಹೇಳಿರಿ, ಹೇಳಿರಿ" ಅಂಜುತ್ತ ಅಂಜುತ್ತ ಅವಳು ಅಂದಳು

"ಇಂದೂ, ನಿನ್ನ ಗಂಡನೂ ನಿರ್ದೋಷಿ ಇಲ್ಲ ಈ ಸಂಪತರಾಯನು ನಿಷ್ಪಾಪನಲ್ಲ ನಾನು ನಿನ್ನ ಕೂಡ ಆಗಬೇಕಾದ ನನ್ನ ಮದುವೆ ಮುಂದೂಡುತ್ತಿದ್ದೆ. ಈ ಮಾತಿನ ನೆನಪು ನಿನಗಿರಬೇಕು. ನಾನು ಒಬ್ಬ ಹುಡುಗಿಯನ್ನು ಪ್ರೀತಿಸುತ್ತಿದ್ದೆ. ಅವಳೊಡನೆ ನಾನು ಗುಪ್ತ ರೀತಿಯಿಂದ ಮದುವೆಯಾಗಿದ್ದೆ. ಒಂದೂರಲ್ಲಿ ಒಂದು ಮನೆ ಬಾಡಿಗೆ ಹಿಡಿದ ಅಲ್ಲಿ ಅವಳನ್ನು ಇಟ್ಟಿದ್ದೆ. ಅವಳು ಬಡ ಕುಟುಂಬದವಳಿದ್ದಳು. ನಮ್ಮ ಮನೆತನ ದೊಡ್ಡದು. ನನ್ನ ತಂದೆ ಇದಕ್ಕೆ ಒಪ್ಪಲಿಕ್ಕಿಲ್ಲ ಎಂಬ ಮಾತಿನ ಅರಿವು ನನಗಿತ್ತು. ಆ ಹುಡುಗಿಯನ್ನು ನನ್ನ ಹೆಂಡತಿಯೆಂದು ಕರೆದುಕೊಂಡು ಬರುವ ಧೈರ್ಯ ನನಗಿಲ್ಲ. ಸಮಾಜದ ಟೀಕೆಗೆ ನಾನು ಅಂಜಿದೆ ಶ್ರೇಷ್ಠ ಕನಿಷ್ಟ ಭೇದದ ಮೋಹಕ್ಕೆ ನಾನು ಒಳಗಾದೆ. ಮನಸಿನಿಂದ ದೊಡ್ಡವನಿರುವವನೇ ದೊಡ್ಡವನು. ಅಂಥವನು ಎಲ್ಲಿ ಹುಟ್ಟಿದರೇನು? ಅಡವಿಯಲ್ಲಿ ಗುಲಾಬಿ ಹೂವಿದ್ದರೂ, ಅದರ ಸುಗಂಧವು ಎಲ್ಲ ಕಡೆಗೆ ಹಬ್ಬದೇ ಇರಲಾರದು ನನ್ನ ಹೆಂಡತಿಯ ಕಡೆಗೆ ನಾನು ಹೋಗತಿದ್ದೆ ಅವಳಿಗೆ ಒಂದು ಹುಡುಗಿ ಹುಟ್ಟಿದಳು. ಆ ಹುಡುಗಿಯನ್ನು ನಾನು ಕರಕೊಳ್ಳುತ್ತಿದ್ದೆ. ನನ್ನ ಹೆಂಡತಿ ನನಗೆ ಹಗಲೆಲ್ಲ

ಕೇಳುತ್ತಿದ್ದಳು, 'ಮನೆಗೆ ಎಂದು ಕರೆದೊಯ್ಯುವಿರಿ ?' ನಾನು ಹೇಳತಿದ್ದೆ 'ಬೇಗ' ಎಂದು. ಕೊನೆಗೆ ಅವಳು ನಿರಾಶೆಗೆ ಒಳಪಟ್ಟಿರಬೇಕು. ಆ ಮಗುವನ್ನು ಕರಕೊಂಡು ಇಲ್ಲಿ ನನ್ನ ಕಡೆ ಬರಲು ಹೊರಟಿರಬೇಕು. ಆ ದಿನದ ಮಾತು ನನ್ನ ನೆನಪಿನಲ್ಲಿದೆಯೇ ? ಹದಿನೈದು ವರುಷದ ಹಿಂದಿನ ಮಾತು. ಮಾನ-ಪ್ಪನ ಗುಡಿಸಲದ ಹತ್ತರ ಓರ್ವ ಅನಾಥ ಸ್ತ್ರೀಯು ಸತ್ತು ಬಿದ್ದಿದ್ದಳು. ಇಂದೂ, ಅವಳೇ ನನ್ನ ಪ್ರಥಮ ಪತ್ನಿ ಮತ್ತು ಮಾನಪ್ಪನ ಮನೆಯಲ್ಲಿ ಜೋಪಾನ ಹೊಂದಿ ಬೆಳೆಯುವ ಬಂಗಾರಿಯೇ ನನ್ನ ಮಗಳು. ನನ್ನ ಮೊದಲನೆಯ ಹೆಂಡತಿ ಊರ ಸೇರಿಯ ಮೇಲೆ ವಿಷಾ ತಿಂದು ಸತ್ತಿದ್ದಳು. ಗಂಡನ ಮಾನಹಾನಿ ಮಾಡುವದಕ್ಕಿಂತ ಸಾಯುವದು ಲೇಸೆಂದು ತಿಳಿದಿ-ದ್ದಳೇ ? ತನ್ನಿಂದ ತನ್ನ ಗಂಡನಿಗೆ ಕುಂದೇ ? ಮತ್ತೆ ಆ ಹುಡುಗಿ ! ನಾನು ಮಾನಪ್ಪನಿಗೆ ಜೋಪಾನ ಮಾಡುವೆನೆಂದು ಅಂದೆ. ಆದರೆ ಅವನು ಒಪ್ಪ-ಲಿಲ್ಲ. ಆ ಹುಡುಗಿ ನನ್ನವಳು ಮತ್ತು ಆ ಮೃತ ಸ್ತ್ರೀ ನನ್ನ ಹೆಂಡತಿ ಎಂದು ಒಪ್ಪುವ ಧೈರ್ಯ ನನ್ನಲ್ಲಿ ಇದ್ದಿಲ್ಲ ಹೀಗಿದೆ ನನ್ನ ಚರಿತ್ರೆ ಇಂದೂ ಈ ಸತ್ಯವನ್ನು ಹದಿನೈದು ವರುಷ ನಿನ್ನಿಂದ ಬಚ್ಚಿಟ್ಟೆ. ಆದರೆ ಇವತ್ತು ಅದನ್ನು ಹೇಳುತ್ತಿದ್ದೇನೆ. ಈ ಪಾಪಿಗಂಡನಿಗೆ ಕ್ಷಮಿಸು ನಿನ್ನ ಪ್ರೀತಿಯಲ್ಲಿ ಇದೆಯೇ ಇಂಥ ಶಕ್ತಿ ? ಇಂದೂ." ಅಂದು ಗಂಡನು ತಲೆವಾಗಿ ಕೂತನು

ಇಂದೂ ನಡುಗುತ್ತಿದ್ದಳು. ಈ ಮಾತು ಕೇಳುವಾಗ ಕ್ಷಣಕ್ಷಣಕ್ಕೆ ಅವಳ ಮುಖ ಬದಲಾಗುತ್ತಿತ್ತು. ಆದರೆ ಕೊನೆಗೆ ಅವಳ ಕಣ್ಣೊಳಗಿಂದ ಕರುಣೆ ಮಿಂಚಿತು. ಅವಳು ಗಂಡನ ತಲೆಯ ಮೇಲೆ ಕೈಯಾಡಿಸಿದಳು ಇಬ್ಬರೂ ಶಾಂತರಾದರೂ ಯಾರೂ ಮಾತಾಡಲಿಲ್ಲ.

" ಇಂದೂ, ಇನ್ನು ನನ್ನನ್ನು ನೀನು ಪ್ರೀತಿಸುವಿಯಾ? ನನ್ನ ತಿರಸ್ಕಾರ ಮಾಡಲಿಕ್ಕಿಲ್ಲವಲ್ಲ ? ನಿನ್ನ ಪ್ರೀತಿಯು ವಿಶಾಲವಾಗಿದೆ. ನಾನು ನಿನಗೆ ಶರಣನಿದ್ದೇನೆ" ಸಂಪತರಾಯ ಅಂದ. " ಇಷ್ಟು ವರುಷಗಳಾದ ಮೇಲೆಯಾದರೂ ನೀನು ಸತ್ಯವಿದ್ದದ್ದನ್ನು ನನ್ನಿದರು ಆಡಿದಿರಿ. ಇದರಲ್ಲಿದೆ ನಿಮ್ಮ ದೊಡ್ಡಸ್ತನ. ಇಲ್ಲದಿದ್ದರೆ ನನಗೆ ಎಂದಾದರೂ ಈ ಮಾತು ತಿಳಿಯು ತ್ತಿತ್ತು. ಇರಲಿ ಆದದ್ದಾಯಿತು ನಾನು, ನೀವು ಬೇರೆ ಅಲ್ಲ ನಿಮ್ಮನ್ನು

ಹೇಗೆ ತಿರಸ್ಕರಿಸಲಿ. ನೀವು ನನ್ನವರೇ ಅಲ್ಲವೇ ? ನಿಮ್ಮನ್ನು ತಿರಸ್ಕರಿಸುವ ದೆಂದರೆ ನನ್ನನ್ನೇ ನಾನು ತಿರಸ್ಕರಿಸಿದಂತೆ. ಇದಿರಲಿ. ಜಗತ್ತಿನಲ್ಲಿ ಯಾರು ನಿರ್ದೋಷಿಗಳಿದ್ದಾರೆ ? ಪ್ರಾಯಶ್ಚಿತ್ತವೆನಿಸಿದರೆ ಸಾಕು ಈ ಮಾತು ನನಗೆ ಮೊದಲೆ ಹೇಳಿದ್ದರೆ ನಾನು ಬಂಗಾರಿಯನ್ನು ಇಲ್ಲಿ ತರುತ್ತಿದ್ದೆನಲ್ಲ ಅವ-ಳನ್ನು ಇಲ್ಲಿ ಜೋಪಾನ ಮಾಡತಿದ್ದೆ ನಮ್ಮ ಮನೆಯಲ್ಲಿ ಆನಂದದ ಗಾಳಿ-ಯಾಡುತ್ತಿತ್ತು. ದೇವರು ನಮಗೆ ಮಕ್ಕಳನ್ನು ಕೊಟ್ಟಿಲ್ಲ. ಆ ಸುಖ ನಮ-ಗಿಲ್ಲ ಈ ಕೊರತೆ ತುಂಬಿ ಬರುತ್ತಿತ್ತು. ನಾನು ಅವಳಿಗೆ ಊಟಕ್ಕೆ ಹಾಕತಿದ್ದೆ, ಎರಿಯುತಿದ್ದೆ, ನನ್ನ ಹತ್ತರ ಮಲಗಿಸಿಕೊಳ್ಳುತ್ತಿದ್ದೆ. ಮಾತೃಸುಖದ ಆನಂದ ವನ್ನು ಉಣ್ಣುತ್ತಿದ್ದೆ. ”

ಹೀಗಂದು ಅವಳು ಸುಮ್ಮನಾದಳು.

“ ನಡೆ, ನಾವು ಮಾನಪ್ಪನಲ್ಲಿ ಹೋಗಿ ಅವನಿಗೆ ಎಲ್ಲ ಹೇಳುವ ಮತ್ತು ಬಂಗಾರಿಯನ್ನು ಮನೆಗೆ ಕರಕೊಂಡು ಬರುವ. ಅವಳಿಗೂ ಎಲ್ಲ ಹೇಳಿದರೆ ಅವಳೂ ಬರುವಳು” ಸಂಪತರಾಯ ಅಂದನು.

“ ಹೋಗುವ ಅವನಲ್ಲಿ ” ಇಂದೂ ಅಂದಳು.

“ ಇವತ್ತು ರಾತ್ರಿ ಹೋಗುವ ” ಅವನು ಅಂದನು.



# ಪ್ರಕರಣ ೮

## ಬಂಗಾರಿ ಒಲ್ಲೆ ಅಂದಳು

ಬಂಗಾರಿ ಮತ್ತು ಮಾಪನ್ನ ಮಾತನಾಡುತ್ತ ಕೂತಿದ್ದರು. ಗುಡಿಸಲದಲ್ಲಿ ದೀಪವಿತ್ತು.

"ಅಪ್ಪಾ, ಶಾಲು ಹೊತ್ತುಕೊಳ್ಳಿರಿ ಇವತ್ತ ಹೊರಗೆ ಚಳಿ ಅದ. ಹಾಕಲ್ಯಾ ಶಾಲು ಮೈಮೇಲೆ ?" ಬಂಗಾರಿ ಅಂದಳು

"ನೀನು ನನಗ ಸಿಕ್ಕ ದಿವಸ ಇವತ್ತಿನಕ್ಕಿಂತ ಹೆಚ್ಚಿನ ಚಳಿ ಇತ್ತು, ನೀನು ತೀರ ಚಿಕ್ಕವಳಿದ್ದರೂ ಅಂಬೆಗಾಲಿಕ್ಕುತ್ತ ನನ್ನ ಮನೆಯಲ್ಲಿ ಬಂದೆ. ನನ್ನ ಚಿಕ್ಕ ಬಂಗಾರಿಗೆ ಚಳಿ ತ್ರಾಸ ಆಗಲಿಲ್ಲ ನಾನಂತೂ ದೊಡ್ಡವ. ಆದ-ರಾಗ ಇವತ್ತ ಅಷ್ಟ ಚಳಿಯೂ ಇಲ್ಲ ನನಗ್ಯಾಂಗ ತ್ರಾಸಾದೀತು ?"

"ಅಪ್ಪಾ, ಇವತ್ತ ಬಂಗಾರ ಸಿಕ್ಕಿತು. ಕನಸಿನಲ್ಲಿ ಸಹ ಇದ್ದಿಲ್ಲ."

"ನಿನ್ನ ಮದುವೆಗಾಗಿ ಬಂದಿತು ರಾಮೂನೂ ಬಡವ. ನಿನಗ ವಸ್ತಾ ಮಾಡಲಿಕ್ಕೆ ಬರಬಹುದು ನಿನಗೆ ವಸ್ತಾ ಸೇರತಾವೋ ಇಲ್ಲೊ."

"ನನಗೆ ಹೆಚ್ಚಾಗಿ ಹೂವು ಸೇರತಾವ. ಇನ್ನು ತೋಟ ಲಗು ಮಾಡೋದು. ನಮ್ಮ ಮದುವೆಗೆ ನಮ್ಮ ತೋಟದಾಗಿನ ಹೂವು. ಆ ಹೂವುಗಳಿಗೆ ನನ್ನ ತಾಯಿಯ ಉಸಿರಿನ ಸುಗಂಧ ಬರುವದು. ತಾಯಿಯ ಆಶೀರ್ವಾದ ಆ ಹೂವುಗಳ ಮುಖಾಂತರ ನನಗೆ ಸಿಗುವದು, ಅಲ್ಲ ಅಪ್ಪ ?" ಅವಳು ಎದೆ ತುಂಬಿ ಬಂದು ಅಂದಳು.

"ಹೌದು, ಮಗು ; ತಾಯಿಯ ಆಶೀರ್ವಾದಕ್ಕಿಂತ ಹಿರಿದಾದ ಮಾತು ಯಾವದು ? ಸಾಯುವಾಗ ಸಹ ಅವಳು ತನ್ನ ಸೀರೆ ಹರದು ಅದನ್ನು ನಿನ್ನ ಸುತ್ತು ಸುತ್ತಿದಳು. ತನ್ನ ಪ್ರೇಮದಿಂದಲೇ ನಿನ್ನನ್ನು ಆವರಿಸಿದಳು. ತಾಯಿ ಸತ್ತಳು. ಆದರೆ ಅವಳ ಪ್ರೀತಿ ಉಳಿಯಿತು. ಪ್ರೀತಿಗೆ

ಸಾವಿಲ್ಲ. ಪ್ರೀತಿಯ ನೆನಪು ಸಹ ನಮ್ಮನ್ನು ಪೋಷಿಸುತ್ತದೆ. ನಮಗೆ ನಿರಾಧಾರವೆಂದು ಅನಿಸುವದಿಲ್ಲ." ಮಾನಪ್ಪ ಅನ್ನುತಿದ್ದ

"ಅಪ್ಪಾ, ರಾಮೂನ ತಾಯಿಗೆ ಕೇಳಿದಿರಾ? ಅವಳು ಎಷ್ಟು ಕೋಮಲ ಸ್ವಭಾವದವಳು! ಅವತ್ತ ನನ್ನ ತಲೆ ನೋಯುತ್ತಿತ್ತು. ಕೂಡಲೆ ಅವಳು ತಿಕ್ಕಿದಳು. ನನ್ನ ಕೆಲಸ ಎಷ್ಟ ಮಾಡತಾರ ಅವರು."

"ಹೌದವ್ವ, ಮಹಾರಾಯಳು ಎಷ್ಟು ದೊಡ್ಡಪ ನಸಿನವಳು ಅವಳು ನನಗೆ ಎಷ್ಟು ಸಾರೆ ಧೈರ್ಯ ಹೇಳಿದ್ದಾಳೆ. ನೀ ಬೇನೆಯಿಂದ ಬಿದ್ದರೆ ಅವಳು ಕೂಡಲೆ ಬರುವಳು ಔಷಧ ಕೊಡುವರು. ನಿನಗೆ ಎಷ್ಟೋಸಾರೆ ಎರೆದಿದ್ದಾಳೆ. ನಿನಗೆ ಬಂಗಾರಿ ಎಂದು ಹೆಸರಿಟ್ಟದ್ದು ಅವಳ ಸೂಚನೆ. ಇಂಥ ಅತ್ತಿ ಸಿಗಬೇಕಾದರೆ ಹಿಂದಿನ ಜನ್ಮದ ಪುಣ್ಯ ಬೇಕು. ನಿನ್ನ ಮೇಲೆ ಅವರ ಜೀವ ಬಹಳ. ರಾಮೂನಂತೆ ನೀನೂ ಅವರಿಗೆ ನೀ ಎಲ್ಲಾರಿಗೂ ಬೇಕಾದಾಕಿ" ಅವಳ ಕೂದಲ ಮೇಲೆ ಕೈಯಾಡಿಸುತ್ತ ಮಾನಪ್ಪ ಅಂದ.

ಹೀಗೆ ಗುಡಿಸಲದಲ್ಲಿ ಮಾತು ನಡೆದಿದ್ದವು. ಅತ್ತ ಸಂಪತರಾಯರು ಮತ್ತು ಇಂದೂ ಗುಡಿಸಲದತ್ತ ಹೊರಡಲು ಹೊರಬಿದ್ದರು ಕುದುರೆ ಗಾಡಿ ತಯಾರಾಗಿ ನಿಂತಿತ್ತು. ಅವರಿಬ್ಬರೂ ಅವರಲ್ಲಿ ಕೂತರು ಇಂದೂನ ಕೈ ಸಂಪತರಾಯನ ಕೈಯಲ್ಲಿತ್ತು. ಗಾಡಿ ಹೊರಟಿತು. ಕುದುರೆಯ ಖುರದ ಟಪ್, ಟಪ್ ಸಪ್ಪಳಾಗುತ್ತಿತ್ತು. ಯಾರ್‍ಯಾರೊ ಮನೆಯೊಳಗಿಂದ ಹೊರಗೆ ಬಂದು ನೋಡಿದರು. "ಮಕ್ಕಳಿಲ್ಲ, ಮನ್ಯಾಗ ಮನಸಿಗೆ ಸಮಾಧಾನ ಇಲ್ಲ. ಹೊರಟಾರ ಆತು ಹವಾ ತಿನ್ನಲಿಕ್ಕೆ" ಎಂದು ಜನ ಗುಣಗುಡತ್ತಿತ್ತು.

ಗುಡಿಸಲ ಹತ್ತರ ಗಾಡಿ ನಿಂತಿತು. ಬಂಗಾರಿ ಮತ್ತು ಮಾನಪ್ಪ ಇಬ್ಬರೂ ಅಚ್ಚರಿಗೊಂಡರು. ಯಾರ ಗಾಡಿ? ರಾತ್ರಿ ವೇಳ್ಯೆ ಯಾರು ಬಂದರು? ನಮ್ಮ ಕಡೆಗೆ ಯಾರಾದರೂ ಬಂದಿದ್ದಾರೆಯೋ? ಏನು ಯಾರಾದರೂ ಪ್ರವಾಸಿಕರೇ? ಅಷ್ಟರಲ್ಲಿ ಬಾಗಿಲ ಮೇಲೆ ಟಕ್ ಟಕ್ ಎಂಬ ಸಪ್ಪಳ ವಾಯಿತು. ಬಂಗಾರಿ ಬಾಗಿಲ ಹತ್ತರ ಬಂದು 'ಯಾರವರು?' ಅಂದಳು "ನಾನು ಸಂಪತರಾಯ" ಎಂದು ಉತ್ತರ ಬಂದಿತು.

ಬಂಗಾರಿ ಬೇಗನೆ ಬಾಗಿಲ ತೆಗೆದಳು. ಬಾಗಿಲಲ್ಲಿ ಸಂಪತರಾಯ, ಇಂದುಮತಿ! ಮುದುಕ ಎದ್ದ. ಬಂಗಾರಿ ಕೂಡಲಿಕ್ಕೆ ಕಂಬಳಿ ಹಾಸಿದಳು

ಮನ್ಯಾಗ ಒಂದು ಆರಾಮ ಖುರ್ಚಿ ಇತ್ತು. ಇನ್ನೊಂದು ಸಾದಾ ಖುರ್ಚಿ ಇತ್ತು. ಅವೆರಡನ್ನು ಮುಂದೆ ಮಾಡಿದರು.

"ಕೂಡರಿ." ಎಂದು ಮಾನಪ್ಪ ಆದರದಿಂದ ಅಂದ.

"ನೀವೂ ಕೂಡರಿ. ಬಂಗಾರೀ, ನೀನೂ ಕೂಡು" ಸಂಪತರಾಯರು ಅಂದರು. "ಬಂಗಾರಿ, ಮಗೂ ಬಾಗಿಲ ಮುಂದೆ ನೋಡು" ಇಂದುಮತಿ ಅಂದಳು.

"ಇವತ್ತ ಸ್ವಲ್ಪ ಚಳಿ ಹೆಚ್ಚ ಅದ" ಮಾನಪ್ಪ ಅಂದ.

"ಗುಡಿಸಲದಾಗ ಅಂತ ಹೆಚ್ಚ ಅನಿಸಿತಿರಬೇಕು ಮತ್ತು ಹೊತಕೊಳ್ಳಲಿಕ್ಕೂ ಬಹಳ ಇರಲಿಕ್ಕಿಲ್ಲ. ಅಲ್ಲ ಬಂಗಾರಿ ?" ಸಂಪತರಾಯ ಕೇಳಿದ.

"ನಾವು ಒಲೆಯೊಳಗ ಬೆಂಕಿ ಇಟ್ಟಿರತೇವಿ. ಅದರಿಂದ ಕಾವು ಇರತದ ಮತ್ತ ಮೇಲೆ ನಮ್ಮ ಅಪ್ಪನ ಪ್ರೀತಿ ಕಾವು ಅದೆ. ಅವರು ನನ್ನ ಬೆನ್ನ ಮೇಲೆ ಕೈಯಾಡಿಸಿದರೆ ಸಾಕು, ಮೈಯಲ್ಲೆಲ್ಲ ಕಾವು ಬರತದ" ಬಂಗಾರಿ ಅಂದಳು.

"ಮತ್ತ, ನೀವು ನಡನಡುವೆ ಸಹಾಯ್ಯ ಮಾಡತೀರಿ. ಬಂಗಾರಿ ವಿಷಯ ಕೇಳತೀರಿ. ಆಕೆ ಸಲುವಾಗಿ ನಾನು ಹೊತಗೊಳ್ಳೊದು ತಗೊಂಡೇನಿ. ನೀವು ಎಷ್ಟು ಉದಾರರ.! ಸಿರಿವಂತಿಕೆ ನಿಮಗೆ ಶೋಭಿಸುತ್ತದೆ. ನಿಮ್ಮ ಸಿರಿವಂತಿಕೆ ಜನರಿಗೆ ಶಾಪವಿರದೆ ಆಶೀರ್ವಾದವಿದ್ದಂತೆ ಅದೆ. ನಿಜವಾಗಿ ಬಂಗಾರಿ ಯಾರ ಮಗಳೋ ಏನೋ? ಓರ್ವ ಅನಾಥ ಸ್ತ್ರೀಯ ಮಗಳು. ಜನರು ಇಂಥವರನ್ನು ತಿರಸ್ಕರಿಸುತ್ತಾರೆ. ಆದರೆ ನೀವು, ಅಂದು ಅವಳನ್ನು ಜೋಪಾನ ಮಾಡಲು ಸಿದ್ಧರಾಗಿದ್ದೀರಿ. ಹದಿನೈದು ವರುಷಗಳಾದರು ಆ ಮಾತು ಇನ್ನೂ ನನ್ನ ನೆನಪಿನಲ್ಲಿದೆ. ಆಗ ನಾನು ಗಟ್ಟಿ ಮನಸು ಮಾಡಿ ಅಂದೆ "ನಾನು ಯಾರಿಗೂ ಇವಳನ್ನು ಕೊಡುವದಿಲ್ಲ. ಅವಳು ನನ್ನ ಕಡೆ ಬಂದಳು, ನನ್ನವಳಾದಳು. ನೀವೂ ಒಳ್ಳೆದು ಅಂದಿರಿ ಮತ್ತು ನನಗೆ ಹತ್ತು ರೂಪಾಯಿ ಕೊಟ್ಟಿರಿ ಮತ್ತು ಮೇಲಿಂದ ಮೇಲೆ ಅವಳ ವಿಷಯ ವಿಚಾರಿಸುತ್ತೀರಿ. ದೊಡ್ಡವರು ನೀವು. ಬಂಗಾರಿನ್ನ ನೀವು ಒಯ್ದಿದ್ದರೆ ನನ್ನ ಅವಸ್ಥೆ ಏನಾಗತ್ತಿತ್ತೋ ಏನೋ ? ಅವಳಿಂದ ನನ್ನ ಜೀವನದಲ್ಲಿ ಆನಂದವು ಬಂದಿತು. ಈ ಹದಿನೈದು ವರುಷ ಎಷ್ಟು ಸುಖದಲ್ಲಿ ಕಳೆದೆ! ಮೊದಲಿನ

ಹದಿನೈದು ವರುಷ ಮತ್ತು ಈ ಹದಿನೈದು ವರುಷ ಎಷ್ಟು ಅಂತರ ! ಬಂಗಾರಿ ನನ್ನನ್ನು ಕೃತಾರ್ಥ ಮಾಡಿದಳು " ಮಾನಪ್ಪ ಬಂಗಾರಿ ಬೆನ್ನ ಮೇಲೆ ಕೈಯಾಡಿಸಿ ಅಂದನು.

. " ಹೌದು, ನಿಮ್ಮನ್ನು ಇಷ್ಟು ದಿನ ಕೃತಾರ್ಥ ಮಾಡಿದಳು. ಈಗ ನಮ್ಮನ್ನು ಕೃತಾರ್ಥವಾಡಲಿ. " ಸಂಪತರಾಯರು ಅಂದರು.

" ಅಂದರೇನು ? " ಮುದುಕ ಅಂಜುತ್ತ ಅಂದ.

" ಮಾನಪ್ಪ ಇಷ್ಟು ರಾತ್ರಿ ನಾವಿಬ್ಬರೂ ಏಕೆ ಬಂದಿದ್ದೇವೆ ಇದರ ಕಲ್ಪನೆ ನಿಮಗೆ ಇದೆಯೇ ? ಚಳಿ ಬಿದ್ದದ. ಬಂಗಾರಿಗೆ ಹೊತಕೊಳ್ಳಲಿಕ್ಕೆ ಏನಾದರೂ ಇದೆಯೇ ಎಂದು ನೋಡಲು ಬಂದಿರಬೇಕು. ಅಥವಾ ಅವಳಿಗೆ ಉಣ್ಣೆದು ಹೊತಗೊಳ್ಳಲಿಕ್ಕೆ ತಂದಿರಬೇಕು. ಇಲ್ಲದಿದ್ದರೆ ಮತ್ತಾವ ರೀತಿ-ಯಿಂದ ಸಹಾಯ್ಯ ಒದಗಿಸಲು ಬಂದಿರಬೇಕು. "

" ನನ್ನ ಸರ್ವಸ್ವವನ್ನು ಬಂಗಾರಿಗೆ ಕೊಡಲಿಕ್ಕೆ ಬಂದಿದ್ದೇನೆ ಪತ್ತಿ-ಪ್ಪತ್ತು ರೂಪಾಯಿ ಸಹಾಯ್ಯ ಎಷ್ಟು ದಿನ ಸಾಕಾಗುವದು ? ಒಂದು ಹೊತಕೊಳ್ಳುವದು ಕೊಟ್ಟರ ಎಷ್ಟು ದಿನ ಸಾಲುವದು ? ನಾವು ಬಂಗಾರಿ-ಯನ್ನು ಕರಕೊಂಡು ಹೋಗಲು ಬಂದಿದ್ದೇವೆ. ಅವಳು ನಮ್ಮ ಕಡೆ ಬರಲಿ. ಸುಂದರ ಕೋಮಲವಾದ ಹುಡುಗಿ. ಬೇಡ ಬಡತನದ ಚಳಿ ಅವಳಿಗೆ. ಅಡವಿಯಲ್ಲಿಯೂ ಹೂವು ಅರಳುತ್ತದೆ ಆದರೆ ತೋಟದಲ್ಲಿ ಹೆಚ್ಚು ಚಲೋ ಅರಳುತ್ತದೆ. ' ತೋಟದಲ್ಲಿಯ ಮೊಗ್ಗೆಗಳು ದೊಡ್ಡವಿರುತ್ತವೆ ಅವಕ್ಕೆ ಹೆಚ್ಚು ಸುಗಂಧ. ಯಾಕಂದರೆ ಅಲ್ಲಿ ಅದರ ಬೆಳವಣಿಗೆ ಚನ್ನಾಗಿ ಆಗುತ್ತದೆ. ಬಂಗಾರಿ ನೆಟ್ಟಗೆ ಬೆಳೆದು ಬಾಳಲಿ. ಅವಳು ಕಲಿಯಲಿ. ನಾನು ಅವಳಿಗೆ ಕಲಿಸಲು ಶಿಕ್ಷಕರನ್ನು ಇಡುವೆ. ಅದರಂತೆ ಕಲೆಯನ್ನು ಕಲಿಸುವ ಶಿಕ್ಷಕ-ರನ್ನು ಇಡುವೆ ಅವಳು ಶಿಕ್ಷಣ ಕಲೆಗಳಲ್ಲಿ ನಿಪುಣಳಾಗಲಿ. ಇಷ್ಟು ದಿನ ನೀವು ಅವಳನ್ನು ಜೋಪಾನ ಮಾಡಿದಿರಿ. ಇನ್ನು ಮುಂದೆ ನಮಗೆ ಮಾಡಲು ಅನುವು ಮಾಡಿಕೊಡಿರಿ. ಇಷ್ಟು ದಿನ ಮನೆಯಲ್ಲಿ ಮಗುವಿನ ಆನಂದ ನೀವು ಉಂಡಿರಿ. ಬಂಗಾರಿಗೆ ತಾಯಿತಂದೆಯಾದಿರಿ. ಈಗ ನಮಗೆ ತಾಯಿ ತಂದೆ ಯಾಗಲು ಸಂಧಿಕೊಡಿರಿ. ನಮಗೂ ಮನೆಯಲ್ಲಿ ಮಕ್ಕಳಿಲ್ಲ ಬಂಗಾರಿ ನಮ್ಮ

ಮಗಳಾಗಲಿ. ಸುಖದಲ್ಲಿ ಬೆಳೆಯಲಿ ನಾವು ಅವಳ ಮದುವೆ ಮಾಡುವೆವು. ಬೇಕಾದಷ್ಟು ಆಭರಣಗಳನ್ನು ಕೊಡುವೆವು. ದೊಡ್ಡವರ ಮನೆತನಕ್ಕೆ ಕೊಡುವೆವು. ಮನೆಯಲ್ಲಿ ಕೆಲಸ ಮಾಡಲು ಆಳುಗಳಿರುವವು. ಅರಸಿಯಂತೆ ಮೆರೆಯಲಿ ಅವಳು. ಮಾನಪ್ಪ, ಹೀಗೆ ಖಿನ್ನರೇಕೆ ಆಗೀರಿ? ನಾನು ಹೇಳುವದರಲ್ಲಿ ನಿಮಗೆ ಆನಂದವಿಲ್ಲವೇ? ಬಂಗಾರಿ ಕೈ ಕೆಲಸ ಮಾಡಿ ಮಾಡಿ ಸೋಲಬೇಕೆಂದು ನಿಮ್ಮ ಇಚ್ಛೆ ಇದೆಯೋ? ಅವಳು ಸುಂದರ ವಸ್ತ್ರಗಳನ್ನು ಧರಿಸಬಾರದೇ? ಬಂಗಾರಿ ಸುಖದಲ್ಲಿ ಬಾಳಬೇಕೆಂದು ನಿಮಗೆ ಅನಿಸುವದಿಲ್ಲವೇ?" ಹೀಗೆಂದು ಸಂಪತರಾಯರು ಸುಮ್ಮನಾದರು. "ಬಂಗಾರಿ, ಇದನ್ನೆಲ್ಲ ನೀನು ಕೇಳಿದ್ದಿ. ನಿನ್ನ ಸುಖಕ್ಕೆ ನಾನೇಕೆ ಅಡ್ಡ ಬರಲಿ. ಬಡತನದ ಬೇಗೆಯು ನಿನಗೆ ಹತ್ತಬೇಕೆಂದು ನಾನು ಹೇಗೆ ಇಚ್ಛಿಸಲಿ? ನನ್ನ ಸ್ವಾರ್ಥಕ್ಕಾಗಿ ನಿನಗೇಕೆ ದುಃಖ? ನಾನೇನು ಒಬ್ಬನೇ ಇರುವೆ. ಒಬ್ಬನೇ ಇದ್ದೆ, ಒಬ್ಬನೇ ಇರುವೆ ನನಗಾಗಿ ನಿನಗೆ ಬೇಡ ಕಷ್ಟ ನೀನು ಅವರಲ್ಲಿ ಹೋಗತೀಯಾ? ನಾನು ಅಡ್ಡ ಬರುವದಿಲ್ಲ ನನ್ನ ಬಂಗಾರಿ ಎಲ್ಲಿಯೇ ಇರಲಿ, ಸುಖದಿಂದ ಬಾಳಲಿ. ನನ್ನದೇನು? ಹಣ್ಣಾಗಿದ್ದೇನೆ ಯಾವಾಗ ಬೀಳುವೆನೋ ನಿಯಮವಿಲ್ಲ. ಇನ್ನು ಎರಡು ದಿನ ಬದುಕುವದದೆ, ಅವನ್ನು ಒಬ್ಬಂಟಿಗನಾಗಿ ಕಳೆಯುವೆ. ನೀನು ಈಗ ದೊಡ್ಡವಳಾಗಿರುವಿ. ನಿನಗೆ ಎಲ್ಲವೂ ತಿಳಿಯುತ್ತದೆ. ನೀನೇ ಹೇಳು. ಅವರು ಉದಾರರಾಗಿ ಕೇಳುತ್ತಿದ್ದಾರೆ. ಹೋಗತೀಯಾ?" ಮಾನಪ್ಪ ಕೇಳಿದ.

"ಇಲ್ಲ ನಿಮ್ಮನ್ನು ಬಿಟ್ಟು ಎಲ್ಲಿ ಹೋಗಲಿ. ಈ ಗುಡಿಸಲವೇ ನನ್ನ ಅರಮನೆ. ನನ್ನ ಸುಖಗಳೆಲ್ಲ ಇಲ್ಲಿ ಇವೆ. ನನ್ನ ಸೊಗಸಿನ ನೆನಪುಗಳೆಲ್ಲ ಈ ಗುಡಿಸಲದಲ್ಲಿವೆ. ಇಲ್ಲಿ ಇದ್ದದ್ದು ಅರಮನೆಯಲ್ಲಿಲ್ಲ. ನನಗೆ ಕೆಲಸದ ಬೇಸರವಿಲ್ಲ ರಾಮೂ ದುಡಿಯುತಾನೆ ದುಡಿಯುವದು ಕೆಳಮಟ್ಟದ್ದೆ? ಕೆಲಸ ಮಾಡುವವನೇ ಮನುಷ್ಯ ದೇವರು ನನಗೆ ಗಟ್ಟಿಯಾದ ಕೈಕಾಲು ಕೊಟ್ಟಾನೆ, ಅವುಗಳ ಪೂಜೆ ಮಾಡಲ್ಯಾ? ಬೇಡ ನನಗೆ ಆಳು ಹೋಳು, ದಾಸಿಯರು. ಬೇಡ ಸುಂದರ ವಸ್ತ್ರ, ವಸ್ತು. ನಾಲ್ಕು ಹೂವು ಮುಡಿದರೆ ಸಾಕು. ಬೇಡ ನನಗೆ ಸಿರಿವಂತಿಕೆ ಅಪ್ಪಾ, ನಾನು ನಿನ್ನ ಹತ್ತಿರವೇ ಇರುವೆ ನೀವೆ ನನ್ನ ಸುಖ" ಬಂಗಾರಿ ಅಂದಳು.

"ನಾವೇನು ನಿನಗೆ ಯಾರೂ ಅಲ್ಲವೇ ? ಬಂಗಾರಿ, ಕೇಳು. ಮಾಸಪ್ಪ ನಿನಗೆ ಸಾಕು ತಂದೆ. ನಿನ್ನ ನಿಜವಾದ ತಂದೆ ನಿನ್ನೆದುರು ನಿಂತಿದ್ದಾನೆ. ನಾನೇ ನಿನ್ನ ತಂದೆ. ನಾನೇ ನಿನಗೆ ಜನ್ಮಕೊಟ್ಟವನು. ಹದಿನೈದು ವರುಷದ ಹಿಂದೆ ನಾನು ನಿನ್ನನ್ನು ಒಯ್ಯುತ್ತಿದ್ದೆ. ಆವರೆ ಅದಾಗಲಿಲ್ಲ. ಈಗ ಬಂದಿ ದೇನೆ. ನಿನ್ನ ತಂದೆಯ ಕಡೆ ಬರಲು ಒಲ್ಲೇ ?" ಸಂಪತರಾಯರು ಭಾವನಾವಶರಾಗಿ ಅಂದರು.

ಕೋಣೆಯಲ್ಲಿಯ ವಾತಾವರಣವು ಗಂಭೀರವಾಯಿತು. ಬಂಗಾರಿಯ ಕಣ್ಣಲ್ಲಿ ನೀರು ನಿಂತವು. ಈಗ ಅವಳ ಕಣ್ಣಿನ ಬಣ್ಣ ಬದಲಾಯಿತು. ಅವು ಕಠೋರವಾದವು ಒಂದು ತರದ ಸಾತ್ವಿಕ ಸಂತಾಪದ ತೇಜವು ಅದ ರಲ್ಲಿ ಕಂಡಿತು. ಆವಳು ತನ್ನ ತುಟಿ ಬಿಗಿಹಿಡಿದಳು ಸ್ವಲ್ಪ ಕೃದ್ಧಳಾದಳು. ಆದರೂ ಇನ್ನೂ ಮಾತು ಹೊರಬಿದ್ದಿದ್ದಿಲ್ಲ. ಸಮ್ಮಿಶ್ರ ಭಾವನೆಯ ಸಾಗರವು ಉಕ್ಕೇರಿತ್ತು. ಅಷ್ಟರಲ್ಲಿ ಇಂದುಮತಿ ಶಾಂತತನದಿಂದ ಅಂದಳು. "ಬಂಗಾರಿ ನೀನು ಕೇಳು. ನಿನ್ನ ಪಿತನ ಮಾತು ಕೇಳು ಅವನಿಗೆ ಸುಖವಾಗಬೇಕೆಂದು ನಡೆ. ಈಗ ಹದಿನೈದು ವರುಷ ಅವರಿಗೆ ಎಷ್ಟು ಉಸಿರುಗಟ್ಟಿದಂತೆ ಆಗಿರ ಬೇಕು ಎಂಬುದನ್ನು ಯೋಚಿಸು ಎಷ್ಟು ಮಾನಸಿಕ ದುಃಖ ಯಾತನೆಗೆ ಒಳಗಾಗಿರಬೇಕು ಅವರು ? ನೀನು ಅವರ ಮಗಳಿದ್ದರೂ ದೂರ ಇದ್ದಿ. ಎಲ್ಲ ಸಂಪತ್ತು ನಿನ್ನದಿದ್ದರೂ ಸ್ವಲ್ಪ ಸಹಾಯ್ಯ ಮಾಡುತ್ತಿದ್ದರು. ಆಗ ಅವರ ಮನಸಿಗೆ ಎಷ್ಟು ದುಃಖವಾಗುತ್ತಿರಬೇಕು ? ತಾವು ಇಲ್ಲಿ ಸುಖದಲ್ಲಿ- ದ್ದೇವೆ, ಕ.ಮರಿ ಗಾಡಿಯಲ್ಲಿ ಓಡಾಡುತ್ತೇವೆ ಆದರೆ ಅಲ್ಲಿ, ತನ್ನ ಮಗಳು ಬಡತನದ ಬೇಗೆಯಲ್ಲಿ ಬೆಯುತ್ತಾಳೆಂಬ ವಿಚಾರದಿಂದ ನಿನ್ನ ಪಿತನಿಗೆ ಏನಾಗಿರಬೇಕು ? ಆದದ್ದಾಯಿತು. ಈಗ ನಿನ್ನ ಪಿತನ ಕಡೆ ನಡೆ. ಅವರ ಮನಸ್ಸಿಗೆ ಶಾಂತಿ ಕೊಡು. ನಾನೂ ನಿನ್ನ ತಾಯಿಯಾಗಲಿ. ನನಗೆ ಮಕ್ಕಳಿಲ್ಲ. ನೀನು ನಿಜವಾಗಿ ನಮ್ಮವಳಾಗು. ಇಲ್ಲಿ ಅನಬೇಡ ಮನೆಯಲ್ಲಿ ಆನಂದ ಬೀರು. ಹಾಡಲು, ಚಿತ್ರ ಬರೆಯಲು ಕಲಿ. ಕಲಾವಂತಳಾಗು. ದೊಡ್ಡ ಮನೆ, ಮಕ್ಕಳಿಲ್ಲದೆ ಭಣಭಣವೆನಿಸುತ್ತದೆ. ನೀ ಬಂದರೆ ಮನೆಯಲ್ಲಿ ಪ್ರಕಾಶ ಬಂದಂತಾಗುವದು, ಸಂಗೀತ ಬಂದಂತಾಗುವದು, ಮಧುರ ವಾತಾವರಣವು ಹಬ್ಬುವದು. ನಮ್ಮ ಸಂಸಾರಕ್ಕೂ ಕಳೆ ಏರುವದು. ಬಂಗಾರಿ

ಕೇಳು ನಮ್ಮ ಮಾತು, ಇಲ್ಲ ಅನಬೇಡ. ತಂದೆಯು ಮಾತನ್ನು ಕೇಳು. ಜಗತ್ತಿನಲ್ಲಿ ತಾಯಿತಂದೆ ದೇವರಿದ್ದಂತೆ. ನಿನ್ನ ತಾಯಿ ಸತ್ತಳು. ಆದರೆ ಸುದೈವದಿಂದ ತಂದೆ ಇದ್ದಾರೆ. ನಿನ್ನ ಇದುರು ಕೂತಿದ್ದಾರೆ. ಇಷ್ಟು ವರುಷಗಳ ತರುವಾಯ ನಿನಗೆ ತಂದೆ ಭೆಟ್ಟಿಯಾಗಿದ್ದರೆಂದು ಆನಂದವೆನಿಸುವದಿಲ್ಲವೇ ? ನಿನ್ನ ಹೃದಯವು ಉಕ್ಕೇರಿ ಬರುವದಿಲ್ಲವೆ ? ಜಗತ್ತಿನಲ್ಲಿ ತಂದೆಯು ಮಾತು ಕೇಳದೆ ಯಾರದು ಕೇಳಬೇಕು ! ಹೌದು, ಮಾನಪ್ಪನ ಅಧಿಕಾರ ನಿನ್ನ ಮೇಲಿದೆ, ಆದರೆ ನಿನಗೆ ಜನ್ಮವೆತ್ತ ತಂದೆಯು ಅಧಿಕಾರ ಹೆಚ್ಚಲ್ಲವೇ ? ”

ಬಂಗಾರಿ ರೊಚ್ಚಿಗೆದ್ದು ಅಂದಳು “ ಜನ್ಮವೆತ್ತ ತಂದೆಗಿಂತ ಪ್ರಾಣ ಉಳಿಸಿದವನೇ ಶ್ರೇಷ್ಠನು ಪಿತನು ನನಗೆ ಜನ್ಮಕೊಟ್ಟನು. ಆದರೆ ನನ್ನನ್ನೂ ನನ್ನ ತಾಯಿಯನ್ನೂ ನಮ್ಮ ನಮ್ಮ ಪಾಡಿಗೆ ಬಿಟ್ಟುಹೋದನು. ಮಾನಪ್ಪನು ನನ್ನ ಪಾಲನ-ಪೋಷಣೆಯನ್ನು ಮಾಡಿದ. ಈಗ ಹದಿನೈದು ವರುಷ ಜೋಪಾನ ಮಾಡಿದರು. ನನಗೆ ಬೇನೆ ಬಂದರೆ ಅವರಿಗೆ ಕಳವಳ ನಾನು ಅವರ ಮೈಮೇಲೆ ಉಚ್ಚಿ ಹೊಯುದಿದ್ದೇನೆ. ನನ್ನ ಅರಿವೆ ಅವರು ಒಗೆದರು. ನನಗ ಸೇರುವಂಥ ಅಡುಗೆ ಅವರು ಮಾಡುತ್ತಿದ್ದರು. ನನಗೆ ಓದುಬರಹ ಕಲಿಸಿದರು, ಕಥೆ ಹೇಳಿದರು. ಅವರು ನನ್ನ ಎಲ್ಲ ಕೆಲಸಗಳನ್ನು ಮಾಡಿದರು. ನನ್ನ ದೇಹದ, ಮನಸಿನ, ಹೃದಯದ ವಿಕಾಸವನ್ನು ಮಾಡಿದರು. ನನ್ನ ಜೀವನದ ತೋಟವನ್ನು ಅರಳಿಸಿದರು. ಈಗ ನಾನು ಅವರನ್ನು ಬಿಡಬೇಕೆ ? ಸಸಿ ಇದ್ದಾಗ ಒಂದು ಸ್ಥಳದಿಂದ ಕಿತ್ತಿ ಎರಡನೆ ಕಡೆಗೆ ಹಚ್ಚಿದರೆ ಹತ್ತುವದು ಆದರೆ ಅದೇ ಗಿಡವಾದ ಮೇಲೆ ಕಿತ್ತಿ ಹಚ್ಚಲಿಕ್ಕೆ ಹೋದರೆ ಸತ್ತು ಹೋಗುವದು. ನಾನು ಚಿಕ್ಕವಳಿದ್ದಾಗ, ಅನಾಥಳಿದ್ದಾಗ; ಅಂಬೆಗಾಲಿಕ್ಕುತ್ತ ಈ ಊರಿಗೆ ಬಂದೆ, ಆಗ ಏಕೆ ನೀವು ನನ್ನನ್ನು ಒಯ್ಯಲಿಲ್ಲ ? ನೀವು ನನ್ನನ್ನು ಕರಕೊಂಡು ಹೋಗಲು ಸಿದ್ಧರಿದ್ದಿರಿ; ಆದರೆ ಒಬ್ಬ ಅನಾಥ ಬಾಲಿಕೆಯೆಂದು ‘ ಇವಳು ನನ್ನ ಮಗಳು, ಮೃತ ಸ್ತ್ರೀಯು ನನ್ನ ಹೆಂಡತಿ ’ ಎಂದು ನೀವು ಜಗತ್ತಿಗೆ ಏಕೆ ಹೇಳಲಿಲ್ಲ ? ಈ ಹುಡುಗಿ ನನ್ನ ಮಗಳೆಂದು ನೀವು ಹೇಳಿದ್ದರೆ ಮಾನಪ್ಪ ಹಟ ತೊಡತಿದ್ದಿಲ್ಲ. ಆದರೆ ಹಾಗೆ ಹೇಳುವ ಧೈರ್ಯ ನಿಮಗೆ ಆಗಲಿಲ್ಲ. ಯಾವ ಮಗುವಿಗೆ ನೀವು ಜನ್ಮ ಕೊಟ್ಟಿರಿ, ಅವಳು ನನ್ನವಳೆಂದು

ಹೇಳುವ ಧೈರ್ಯ ನಿಮಗಿರಲಿಲ್ಲ. ನಿಮಗೆ ನಾಚಿಗೆ ಏಕೆ ಅನಿಸಿತು ? ನನ್ನ ತಾಯಿಗೆ ಹೆಂಡತಿಯೆಂದು ಏಕೆ ಕರೆಯಲಿಲ್ಲ ? ನಿಮ್ಮ ಆ ವಾಡೇದಲ್ಲಿ ಏಕೆ ಕರಕೊಂಡು ಹೋಗಲಿಲ್ಲ. ನೀವು ಅವಳನ್ನು ಕರೆದು ತಂದಿದ್ದರೆ ನಾನು ನಿಮ್ಮ ತೊಡೆಯ ಮೇಲೆ ಆಡತಿದ್ದೆ. ಇನ್ನೂ ಕೆಲವು ತಮ್ಮಂದಿರು ತಂಗಿಯರು ಆಗುತ್ತಿದ್ದರು ನಿಮ್ಮ ವಾಡೆ ಗೋಕುಲದಂತೆ ಮೆರೆಯುತ್ತಿತ್ತು. ಆದರೆ ನೀವು ನನ್ನ ತಾಯಿಯನ್ನು ಮೋಸಗೊಳಿಸಿದಿರಿ. ನಿಮ್ಮ ಹೆಂಡತಿ ಎಂದು ಹೇಳಲು ನಾಚಿದಿರಿ. ನಿಮ್ಮದು ದೊಡ್ಡ ಮನೆತನ. ನನ್ನ ತಾಯಿ ಬಡವಿ. ದುಡಿಯುವವರ ಮನೆಯಲ್ಲಿ ಹುಟ್ಟಿದವಳು. ಅದಕ್ಕೆ ನಿಮಗೆ ನಾಚಿಗೆ. ಪ್ರೇಮಕ್ಕಿಂತ ಮನೆತನದ ದೊಡ್ಡಿಸ್ತಿಕೆಯ ಅಭಿಮಾನ ಹೆಚ್ಚು ನಿಮಗೆ. ಏನು ಮಾಡುವದು ಇಂಥ ಸಿರಿವಂತಿಕೆ ? ಸುಟ್ಟು ಬಿಡರಿ ಈ ಸಿರಿವಂತಿಕೆ. ಯಾವ ಸಿರಿವಂತಿಕೆಗೆ ಮಾನವ ಹೃದಯದ ಅರಿವಿಲ್ಲ, ಪ್ರೇಮ ಕರ್ತವ್ಯಗಳ ಬೆಲೆ ಇಲ್ಲ, ಅಂಥದಕ್ಕೆ ಒಂದು ಪೈ ಬೆಲೆ ಸಹ ಇಲ್ಲ ನಾನೇಕೆ ಇಂಥ ಸಿರಿವಂತಿಕೆ ಅನುಭವಿಸುವವಳಾಗಲಿ ? ನಾನೂ ಆ ಮೇಲೆ ಬರೀ ದುಡ್ಡಿಗೆ ಬೆಲೆ ಕೊಟ್ಟು ಮಾನವತೆಯನ್ನು ಮರೆಯುವೆ ಆ ಮೇಲೆ ನಾನು ರಾಮೂನ ಮದುವೆಯಾಗಲು ಸಿದ್ಧವಾಗುವೆನೆ ? ”

“ ರಾಮೂನ ಕೂಡ ಮದುವೆ ? ಆ ಸಖಾರಾಮನ ಮಗನ ಕೂಡ ? ” ಸಂಪತರಾಯ ಆಶ್ಚರ್ಯದಿಂದ ಅಂದ

“ ಹೌದು ರಾಮೂನೊಡನೆ ಮದುವೆ. ಅವನು ಬಡವ. ಅವನ ತಂದೆ ಬಡವ, ಆದರೆ ಮನಸು ದೊಡ್ಡದದೆ. ಆ ರಾಮೂನ ಕೂಡ ನಾನು ಮದುವೆಯಾಗುವವಳಿದ್ದೇನೆ. ನೀವು ಈ ಮಾತಿಗೆ ಒಪ್ಪಬಹುದೇ ? ನಿಮಗೆ ಬೇಕು ದೊಡ್ಡ ಮನೆತನ. ಎಷ್ಟು ದೊಡ್ಡದು ಅಷ್ಟೆ ಸುಳ್ಳು ಪೊಳ್ಳು. ನಾನು ಬರೀ ದೊಡ್ಡ ಮನೆ ನೋಡಲ್ಯಾ ? ದೊಡ್ಡ ದೊಡ್ಡ ಕಂಬ, ಜಂತಿ ನೋಡಲ್ಯಾ ? ಏನು ಬರೀ ಮೈಮೇಲೆ ಹಾಕಿದ ವಸ್ತ್ರಗಳನ್ನೇ ನೋಡುತ್ತ ಕೂಡ್ರಲಿ ? ಮಾನಪ್ಪ ಮೊದಲು ಬರೀ ಬಂಗಾರದ ನಾಣ್ಯ ಎಣಿಸುತ್ತ, ಅಪ್ಪಿಕೊಳ್ಳುತ್ತ ಮುದ್ದಿಡುತ್ತ ಕೂಡುತ್ತಿದ್ದಿಲ್ಲವೇ ? ಅದರಲ್ಲಿ ಅವರಿಗೆ ಸಮಾಧಾನವಿತ್ತೇ ? ಸಮಾಧಾನವು ಮಾನವತೆಯಲ್ಲಿದೆ, ನಿರ್ಮಲವಾದ ಪ್ರೇಮದಲ್ಲಿದೆ. ಅದೇನು ಅಹಂಕಾರ, ದುಡ್ಡು, ಮನೆತನಗಳ ಗರ್ವದಲ್ಲಿದೆಯೆ ? ಸಿರಿವಂತರ ರಕ್ತ-

ವೇನು ಜೇರೆ ಇದೆಯೆ? ಸತ್ತಮೇಲೆ ಅವರ ದೇಹದ ಬಂಗಾರವಾಗುತ್ತ-
ದೆಯೋ, ಮತ್ತು ಬಡವರು ಸತ್ತರೆ ಅವರದೇಹವು ಮಣ್ಣಾಗುತ್ತದೆಯೋ?
ಎಲ್ಲರೂ ಮಣ್ಣಿನ ಗೊಂಬೆ. ಏತಕ್ಕಾದರೂ ಬೆಲೆ ಇದ್ದರೆ ಮಣ್ಣಿನ ಕೊಡ
ದಲ್ಲಿರುವ ಮನಸಿಗೆ, ಪ್ರೀತಿಯಿಂದ ತುಂಬಿದ ಹೃದಯಕ್ಕೆ, ಉದಾರ ವಿಚಾರ
ಗಳಿಗೆ. ಬೇಡ ನಿಮ್ಮ ಸಿರಿವಂತಿಕೆ ನನಗೆ. ಈ ಗುಡಿಸಲದಲ್ಲಿ ನನಗೆ ಎಲ್ಲ
ಸುಖವಿದೆ. ಈ ಗುಡಿಸಲದಲ್ಲಿಯ ರೊಟ್ಟಿ ನನಗೆ ನಿಮ್ಮ ಅರಮನೆಯಲ್ಲಿಯ
ಸುಗ್ರಾಸ ಊಟಕ್ಕಿಂತ ಹೆಚ್ಚಿನದು. ಈ ಗುಡಿಸಲದಲ್ಲಿರುವ ಅಣುರೇಣು
ಗಳಲ್ಲಿ ಪ್ರೀತಿ ತುಂಬಿದೆ, ಕರ್ತವ್ಯದ ಪರಿಮಳ ಹಬ್ಬಿದೆ. ಈ ನನ್ನ ಸ್ವರ್ಗ
ಬಿಟ್ಟು ನಾನು ಬರಲ್ಯಾ? ನಾನು ಇಲ್ಲೇ ಇರುವೆ. ನನ್ನ ಮಾನಪ್ಪ, ಅವನ
ಹತ್ತಿರವೆ ಇರವೆ. ಅವರೇ ನನ್ನ ತಾಯಿತಂದೆ ಅವರದೇ ನನ್ನ ಮೇಲೆ
ಅಧಿಕಾರ. ಮುಪ್ಪಿನ ಕಾಲದಲ್ಲಿ ಅವರನ್ನು ಬಿಟ್ಟು ಬರಲ್ಯಾ? ನಾ ಹೋದರೆ
ಅವನಿಗೆ ಭಣಭಣವೆನಿಸುವದು. ನಾನು ಕೃತಘ್ನನಾಗಲ್ಯಾ? ಸ್ವಲ್ಪ ಎಲ್ಯಾರ
ಹೊರಗ ಹೋದರ ಅವರ ಕಣ್ಣು ನನ್ನನ್ನು ಹುಡುಕಲಿಕ್ಕೆ ಹತ್ತತಾವ.
ಅವರಿಗೆ ಏನು ಅನಿಸೀತು? ಮುಪ್ಪಿನಲ್ಲಿ ನಾನು ಅವರಿಗೆ ಅಳಸಲ್ಯಾ? ಇನ್ನು
ಸ್ವಲ್ಪ ದಿವಸ ಉಳಿದವು, ಅವನ್ನು ಅವರು ದುಃಖದಲ್ಲಿ ಕಳೆಯಬೇಕೆ?
ಈಗ ಅವರಿಗೆ ನನ್ನ ಗಂಜು. ಈಗ ನಾನು ಅವರಿಗೆ ಅಡಿಗಿ ಮಾಡಿ ಹಾಕ-
ತೇನಿ. ಅವರಿಗೆ ಸೇರುವಂಥ ಪದಾರ್ಥ ತಯಾರ ಮಾಡತೇನಿ ಅವರಿಗೆ
ಜಳಕಕ್ಕೆ ಬಿಸಿನೀರು ಕೊಡತೇನಿ ಅವರ ಹಾಸುಗೆ ಹಾಸಿಕೊಡತೇನಿ
ಭಕ್ತಿ ಪ್ರೇಮದಿಂದ ಅವರು ಕಾಲು ಒತ್ತುವೆನು. ರಾತ್ರಿ ಅವರ ಹತ್ತಿರ
ಕೂತು ಅವರಿಗೆ ಚಲೋ ಪುಸ್ತಕ ಓದಿ ತೋರಿಸುವೆ. ಅವರ ಕೈ ಹಿಡಿದು
ಅಡ್ಡಾಡಲಿಕ್ಕೆ ಕರಕೊಂಡು ಹೋಗುವೆ ಮಾನಪ್ಪನ ಉಳಿದ ನಾಲ್ಕು ದಿನ
ಸುಖದಿಂದ ಹೋಗಲಿ ಅವನನ್ನು ಬಿಟ್ಟು ನಾನು ಎಲ್ಲಿಯೂ ಹೋಗು-
ವಂತಿಲ್ಲ." ಹೀಗೆಂದು ಅವಳು ಮಾನಪ್ಪನ ಕೊರಳಲ್ಲಿ ಬಿದ್ದಳು. ಮುದುಕನ
ಕಣ್ಣೊಳಗಿಂದ ನೀರು ಸುರಿಯುತ್ತಿತ್ತು.

"ಬಂಗಾರಿ, ನಿನ್ನ ಮಾತು ಸತ್ಯವಿದೆ. ನೀನು ಇಲ್ಲೇ ಇರು. ನಿನ್ನ
ತಂದೆಗೆ ಕ್ಷಮಿಸು. ಅವನ ವಿಷಯಕ್ಕೆ ಕಠೋರ ಭಾವ ಮನಸಿನಲ್ಲಿ ಬೇಡ.
ನಾವೆಲ್ಲರು ಮನುಷ್ಯರು. ಮೇಲಿಂದ ಮೇಲೆ ತಪ್ಪು ಮಾಡುವವರು. ಇರಲಿ.

ಸುಖದಿಂದ ಬಾಳು. ಎಲ್ಲಿ ಇದ್ದರೂ ಸುಖದಿಂದ ಇರು. ನಾವೇನಾದರೂ ಕಳಿಸಿದರೆ ಅದನ್ನು ಸ್ವೀಕರಿಸು. ನಮ್ಮನ್ನು ಪರಕೀಯರೆಂದು ಭಾವಿಸಬೇಡ. ನಿನ್ನ ಹೃದಯದಲ್ಲಿ ನಿನ್ನ ಪಿತನಿಗಾಗಿ ಸ್ವಲ್ಪ ಸ್ಥಳವಿರಲಿ. ಮಾನಪ್ಪನ ಉಳಿದ ನಾಲ್ಕು ದಿನ ಸುಖದಿಂದ ಹೋಗಲಿ. ನೀವ್ಯಾರೂ ನನ್ನ ಮೇಲೆ ಸಿಟ್ಟಾಗಬೇಡಿ. ಕ್ಷಮಿಸಿರಿ. ಬರತೇನಿ ಇನ್ನು" ಇಂದುಮತಿ ಗಂಡನ ಕೈ ಹಿಡಿದು ಅಂದಳು.

ಸಂಪತರಾಯರು ಎದ್ದರು. ಹೆಂಡತಿ ಬಂಗಾರಿಯ ಕೈ ಹಿಡಿದಿದ್ದಳು ಅವಳು ಬಾಗಿಲ ಚಿಲಕವನ್ನು ತೆಗೆದಳು. ಹೊರಗೆ ಗಾಡಿ ಹೊಡೆಯುವವನು ಗಾಡಿಯಲ್ಲಿ ಮಲಗಿದ್ದ. ಅವನು ಬಾಗಿಲ ಸಪ್ಪಳವನ್ನು ಕೇಳಿ ಎದ್ದನು. ಅವನು ನಾಚಿದನು ಅವನು ಒಮ್ಮೆಲೆ ಎದ್ದು ನಿಂತನು ಅವರಿಬ್ಬರೂ ಗಾಡಿಯಲ್ಲಿ ಕೂತರು. ಮಾನಪ್ಪ, ಬಂಗಾರಿ ಬಾಗಿಲಲ್ಲಿ ನಿಂತಿದ್ದರು ಕುದುರೆ ಗಾಡಿ ಹೊರಟಿತು ಚಬಕದ ಸಪ್ಪಳವಾಯಿತು. ರಾತ್ರಿಯ ಶಾಂತ ಸಮಯದಲ್ಲಿ ಕುದುರೆಯ ಟಪ್, ಟಪ್ ದನಿ ತುಂಬಿತ್ತು. ಎಚ್ಚರಿದ್ದವರು ಅಂದರು. 'ಯಜಮಾನರು ತಿರುಗಿದರು ಕಾಣಿಸತದ' ಆ ಸಪ್ಪಳ ಕೇಳದಂತಾಯಿತು. ಬಂಗಾರಿ ಮಾನಪ್ಪ ಮನೆಯೊಳಗೆ ಹೋದರು. ಬಂಗಾರಿ ಮಾನಪ್ಪನ ಕೊರಳಲ್ಲಿ ಬಿದ್ದಳು. ಅವಳಿಗೆ ಕಣ್ಣೀರು ತಡೆಯುವದಾಗಲಿಲ್ಲ. ಮಾನಪ್ಪ-ನಿಗೂ ಅಳುವು ಬಂತು. ಸಾವಕಾಶ ಇಬ್ಬರ ಭಾವನೆಗಳ ಉಕ್ಕು ಕಡಿಮೆ-ಯಾಯಿತು. ಮಾತನಾಡಲು ಅವಸರ ದೊರೆಯಿತು.

"ಅಪ್ಪಾ ನಾನು ನಿನ್ನನ್ನು ಎಂದೂ ಬಿಡುವದಿಲ್ಲ"

"ಹೌದು, ಮಗು ನೀನು ಒಳ್ಳೆಯವಳು."

---

# ಪ್ರಕರಣ ೯

## ಬಂಗಾರಿಯ ಮದುವೆ

ಮಾನಪ್ಪನ ಗುಡಿಸಲದ ಹತ್ತರ ತೋಟವು ತಯಾರಾಯಿತು ತೋಟಕ್ಕೆ ಸುತ್ತಲು ಗೋಡೆ ಕಟ್ಟಿದ್ದೂ ಆಯಿತು. ಅಲ್ಲಿ ಒಂದು ಬಾವಿ ತೋಡಿದರು. ಅದಕ್ಕೆ ನೀರು ಬೇಕಾದಷ್ಟು ಇತ್ತು. ತೋಟವು ಬಹಳ ಚನ್ನಾಗಿ ಯೋಚನೆ ಮಾಡಿ ಮಾಡಿದರು. ಅಲ್ಲಲ್ಲಿ ಹೂವಿನ ಗಿಡಗಳ ಮಡಿಗಳನ್ನು ಮಾಡಿದರು. ಸ್ವಲ್ಪ ದಿವಸಗಳೊಳಗೆ ತೋಟದಲ್ಲಿ ಹೂಗಳು ಅರಳಿದವು. ಹೂಬಳ್ಳಿಗಾಗಿ ಮಂಟಪಗಳನ್ನು ಹಾಕಿದರು. ಅವೂ ಮಂಟಪದ ಮೇಲೆ ಹಬ್ಬಿ ತುಂಬಾ ಹೂ ಬಿಡುತ್ತಿದ್ದವು. ತೋಟದ ಮಧ್ಯಭಾಗದಲ್ಲಿ ಆ ಪವಿತ್ರ ಸ್ಥಳವಿತ್ತು. ಅದರ ಸುತ್ತಲು ಹೂವಿನ ಗಿಡಗಳಿದ್ದವು ನಡುವೆ ಹಚ್ಚಗಾದ ಆ ಸ್ಥಳ ಶೋಭಿಸುತ್ತಿದ್ದಿತು ತೋಟ ಬಹಳ ಚಂದವಾಗಿ ಕಾಣುತ್ತಿತ್ತು

ರಾಮನಿಗೆ ಬೇರೆ ಕೆಲಸವಿಲ್ಲದಾಗ ಅವನು ಬಂದು ತೋಟದಲ್ಲಿ ಕೆಲಸ ಮಾಡುತಿದ್ದ ಒಮ್ಮೊಮ್ಮೆ ನಸುಕು ಹರಿಯುವದರೊಳಗಾಗಿ ಬಂದು ದುಡಿಯುತ್ತಿದ್ದ. ಎರಡನೆಯ ಕಡೆ ಕೆಲಸಕ್ಕೆ ಹೋಗುವ ಮೊದಲು ಒಂದು ತಾಸು ದುಡಿದು ಹೋಗತ್ತಿದ್ದ ಹೀಗೆ ಒಂದು ದಿನ ಅವನು ಕೆಲಸ ಮಾಡುವಾಗ ಇನ್ನೂ ನಸುಕು ಹರಿಯುವ ಮೊದಲೇ ಬಂಗಾರಿ ತೋಟದಲ್ಲಿ ಬಂದಳು. ಅಲ್ಲಿ ನೋಡಿದರೆ ರಾಮೂ ಹೂವಿನ ಗಿಡಗಳಿಗೆ ನೀರು ಹಾಕುತಿದ್ದ

“ ಇದೇನು ರಾಮು, ನೀ ಯಾವಾಗ ಬಂದಿ ? ”

“ ನೀನು ಬರುವ ಮೊದಲು. ಬಂಗಾರಿ ತೋಟ ಚಂದ ಇರಬೇಕಲ್ಲ ”

“ ಈ ತೋಟ ಏನು ಬಂಗಾರಿಯದೇ ? ರಾಮೂನದು ಅಲ್ಲನೇ ? ”

“ ಇಬ್ಬರದು. ”

“ ರಾಮು, ನೀನು ನನಗಾಗಿ ದಣಿಯುತ್ತಿ. ನನ್ನ ಮನಸಿನ ಇಚ್ಛೆ ತೃಪ್ತಿಯಾಗಬೇಕೆಂದು ದುಡಿಯುತ್ತಿ. ಇಡೀ ದಿನ ಎರಡನೆ ಕಡೆ ದುಡಿದು ಮತ್ತೆ ಇಲ್ಲಿ ದುಡೀತಿರುವಿ ”

“ಬೇರೆ ಕಡೆಗೆ ಆದ ದಣಿವು ಇಲ್ಲಿ ಆರಿಹೋಗುತ್ತದೆ. ಇಲ್ಲೇ ನನಗೆ ವಿಶ್ರಾಂತಿ. ಇಲ್ಲಿ ಮಾಡಿದ ಕೆಲಸದಿಂದ ನನಗೆ ದಣಿವಾಗುವದಿಲ್ಲ, ಹೆಚ್ಚು ಉತ್ಸಾಹವೆನಿಸುತ್ತದೆ.”

“ರಾಮೂ, ಆ ಜಾಗಾದ ಹತ್ತಿರ ಹೋಗುವ, ಬರತೀ?”

“ನಡೆ”

ಇಬ್ಬರೂ ಆ ನಡುವಿದ್ದ ಜಾಗಾನ ಹತ್ತಿರ ಬಂದರು. ಬಂಗಾರಿ ಕೈ ಮುಗಿದು ನಿಂತಳು. ರಾಮೂನೂ ಕೈಮುಗಿದ. ಇಬ್ಬರೂ ತುಸು ಹೊತ್ತು ಸುಮ್ಮನೆ ನಿಂತರು. ಆ ಮೇಲೆ ಬಂಗಾರಿ ಅಂದಳು “ನಡೆ ಹೋಗುವ ಇನ್ನು.”

“ಇಲ್ಲಿ ನಾನು ಬೇಕಂತ ತರತರದ ಹೂಗಿಡಗಳನ್ನು ಹಚ್ಚಿದ್ದೇನೆ. ಈ ಪಚ್ಚಾದ ಹುಲ್ಲಿನಲ್ಲಿ ಕೆಲವು ಬೀಜ ಹಾಕತೇನಿ. ಅಂದರ ಹೂ ನೋಡಿ ಮನಸಿಗೆ ಆನಂದವಾಗಬೇಕು”

“ಇವತ್ತು ಕೆಲಸದ ಮೇಲೆ ಹೋಗುವದಿಲ್ಲವೋ?”

“ಹೌದು, ಹೋಗುವದದೆ.”

“ಹಾಗಾದರೆ ಇಲ್ಲೇ ರೊಟ್ಟಿ ತಿಂದು ಹೋಗು. ಈಗ ತಾಜಾ ರೊಟ್ಟಿ ಮಾಡಿಕೊಡತೇನಿ. ಬರತೀ?”

“ಇದನ್ನೇನು ನೀ ಮಾಡಿದ ರೊಟ್ಟೀನ ತಿನ್ನೋದ ಅದ ದಿನಾದಿನ.”

“ದಿನಾದಿನ ತಿನ್ನೋದಕ್ಕಿಂತ ಮೊದಲ ಸ್ವಲ್ಪ ತಿಂದು ನೋಡು. ನನ್ನ ಪರೀಕ್ಷಾ ತಗೋ.”

“ಪರೀಕ್ಷಾ ಎಂದೋ ತಗೊಂಡೀನಿ. ನೀನು ಪರೀಕ್ಷೆಯಲ್ಲಿ ಪಾಸು.”

“ಎಷ್ಟನೇ ನಂಬರ”

“ಮೊದಲನೇ ನಂಬರು.”

“ಮತ್ತ್ಯಾರದ್ಯಾರ ಪರೀಕ್ಷಾ ತಗೊಂಡಿದಿ ಏನು?”

“ಇಲ್ಲ. ತುಂಟ ಇದ್ದಿ ನೋಡು ನೀನು ನಡೆ ಬೇಗ.”

ಇಬ್ಬರು ಮನೆಗೆ ಬಂದರು. ಮಾನಪ್ಪ ಕಾಸಿಕೋತ ಕೂತಿದ್ದ.

“ಚಳ್ಯಾಗ ಯಾಕ ಇಷ್ಟು ಲಗು ಎದ್ದಿಯೇ ಬಂಗಾರಿ? ಅವನು ಕೇಳಿದನು “ನಮಗೆಲ್ಲಿ ಚಳಿ. ಅಪ್ಪ” ನಕ್ಕೋತ ಅಂದಳು.

" ತೋಟದಾಗ ಹೋಗಿದ್ದಿ ಏನು ? "

" ಹೌದು ಮತ್ತೆ ಈಗ ರಾಮೂಗೆ ರೊಟ್ಟಿ ಮಾಡಿಕೊಡತೇನಿ. ತಾಜಾ ರೊಟ್ಟಿ ತಿಂದು ಕೆಲಸಕ್ಕೆ ಹೋಗತಾನ ನೀವು ಸ್ವಲ್ಪ ಬದಿಗಾಗಿರಿ. ಒಲೆ ಮೇಲೆ ಹಂಚು ಇಡತೇನಿ. "

ಮಾನಪ್ಪ ದೂರ ಆದ ಬಂಗಾರಿ ಹಿಟ್ಟು ತಗೊಂಡಳು. ಹಂಚಿನ ಮೇಲೆ ರೊಟ್ಟಿ ಬಿತ್ತು, ಎರಡನೆ ರೊಟ್ಟಿಗೆ ಹಿಟ್ಟು ಬೇಕಾಗಿತ್ತು.

" ರಾಮೂ ಸ್ವಲ್ಪ ಹಿಟ್ಟು ಕೊಡತೀಯಾ ? "

" ಹೂಂ. "

ಅವ ಹಿಟ್ಟ ಹಾಕಿದ, ಆದರ ಸ್ವಲ್ಪ ಹೆಚ್ಚು ಹಿಟ್ಟ ಬಿತ್ತು.

" ಇಷ್ಟ್ಯಾಕ, ನೋಡದ್ಯಾ ? ನಾಲ್ಕು ರೊಟ್ಟಿ ಆದಾವು. ಬಹಳ ಹಸಿವು ಆಗೇದೇನು ? " ಬಂಗಾರಿ ನಕ್ಕೊತ ಕೇಳಿದಳು.

" ನಾ ಒಬ್ಬನ ತಿನ್ನಲಿ ಏನು ? " ನೀನೂ ನನ್ನ ಕೂಡ ತಿನಬೇಕು. ಇಬ್ಬರಿಗಾಗಿ ಈ ಹಿಟ್ಟು. ನೀನು ಬರೇ ನನ್ನದ ಚಿಂತೀ ಮಾಡತಿ. ಆದರ ನಾ ನ ಇಬ್ಬರ ಚಿಂತೆ ಮಾಡತೇನಿ ಹೌದೊ ಅಲ್ಲೊ ? " ಅವನು ನಕ್ಕು ಅಂದನು. " ಅಪ್ಪಾ, ನೀವೂ, ನಮ್ಮ ಕೂಡ ಬಿಸಿ ಬಿಸಿ ರೊಟ್ಟಿ ತಿಂತೀರೇನು ? ನಾನು ಹಂಚಿನ ಮೇಲೆ ಬಿಸಿ ಬಿಸಿ ಝುಣಕಾನೂ ಮಾಡತೇನಿ. ನಾವು ಎಲ್ಲಾರೂ ತಿನ್ನೋಣ " ಬಂಗಾರಿ ಅಂದಳು

" ಹೂಂ, ತಿಂತೇನಿ ನಿಮ್ಮ ಕೂಡ. ಮುದಕರಿಗೆ ಬೇಗಾದ ಕೂಡಲೇ ತಿನ್ನೋದು ನಾಚಿಗೆ. ಆದರ ಬಂಗಾರಿ ಕೂಡ ತಿನ್ನೋದರಾಗ ಆನಂದ ಐದ." ಮಾನಪ್ಪ ಅಂದ ರೊಟ್ಟಿ ಆದವು. ಎಲ್ಲಾರೂ ರೊಟ್ಟಿ ತಿನ್ನಲಿಕ್ಕೆ ಕೂತರು. ಅಷ್ಟರಾಗ ಸಾಳವ್ವ ಬಂದಳು. " ಇದೇನೊ ರಾಮು ? ಕೆಲಸಕ್ಕೆ ಹೋಗೊ ಹಾಂಗ ಇಲ್ಲೇನು ? ಇಲ್ಲೆ ತಿನಕೋತ ಕೂತಿ ? ಮನ್ಯಾಗ ರೊಟ್ಟಿ ಮಾಡಿ ಇಟ್ಟೆನಿ ! " ಅವಳಂದಳು.

" ಇಲ್ಲೆ ತಿಂದರ ಏನಾತು ?" ಮಾನಪ್ಪ ಕೇಳಿದ.

" ನೀವೇನು ನಮಗ ಹೊರಗಿನವರಲ್ಲ ಮಾನಪ್ಪ ಆದರ ಮನ್ಯಾಗ ಹೇಳಬಾರದೇನು ? ನಾ ಅಲ್ಲೆ ಹಾದಿ ನೋಡಿಕೋತ ಕೂತೆ ಇಲ್ಲ ಬಂಗಾರಿ

ಮುಂಜ ನೆ ಎದ್ದ ಕೂದಲೆ ಇಷ್ಟ್ಯಾಕ ರೊಟ್ಟಿ ಬಡಿವಿ ? " ಎಂದು ಆಶ್ಚರ್ಯ-ದಿಂದ ಸಾಳವ್ವ ಅಂದಳು

" ರಾಮೂನ ಕೂಡ ಆಡಲಿಕ್ಕೆ. ಅವಗ ಇಡೀ ದಿವಸ ಕೆಲಸ ಅವನ ಕೂಡ ಆಕಿಗೆ ಮಾತ ಡಲಿಕ್ಕೆ ವೇಳ್ಯಿನ ಸಿಗುವದಿಲ್ಲ. ಅದಕ ಇವತ್ತ ಮುಂಜಾನೆ ಮಾತಾಡಿದರಾತು ಅಂದೆ " ನಕ್ಕೋತ ಬಂಗಾರಿ ಅಂದಳು.

" ಆಡಲಿಕ್ಕೆ ನೀವೇನು ಸಣ್ಣವರ ಈಗ ? " ಸಾಳವ್ವ ಕೇಳಿದಳು.

" ನಾವೇನು ದೊಡ್ಡವರಾದೆವೇನು ? ಬಂಗಾರಿ ಕೇಳಿದಳು.

" ಇಲ್ಲೇನು ? ಇನ್ನ ನಿನ್ನ ಮದುವೆ ಮಾಡಬೇಕು, ಬಂಗಾರಿ, ತಿಳೀತ? ನೀ ಏನು ಸಣ್ಣಾಕಿ ಅಲ್ಲ ನಾಳೆ ಅತ್ತಿ ಮನೆಗೆ ಹೋದಿ ಅಂದರ ಸಣ್ಣಾಕಿ ಅಂತ ತಿಳಕೊಂಡು ಹಾಂಗs ಮಲಕೊಂಡಿ. ಅತ್ತಿ ಮಾತಾಡ್ತ್ಯಾಳು, ಸಿಟ್ಟ್ಯಾ-ವಾಳು " ಸಾಳವ್ವ ಅಂದಳು.

" ಹೊಡೆಯೂದಿಲ್ಲ ಹಾದಲ್ಲೊ ? " ನಕ್ಕೋತ ಬಂಗಾರಿ ಕೇಳಿದಳು.

" ಹೊಡೆದರೂ ಹೊಡೆದಾಳು ! ಕೆಲ ಕೆಲವು ಅತ್ತೆಂದೇರು ಹಾಂಗೂ ಇರತಾರ ತಯಾರ ಇರು, ಬಂಗಾರಿ. " ರಾಮು ಅಂದ.

" ಆದೇನ ಇರಲಿ, ನಾ ಅನಕಾ ನನಗ ತಾಯಿಯಹಾಂಗ ನೋಡೋ ಅಂಥ ಅತ್ತೀನ್ನ ಹುಡುಕತೇನಿ ನಾ ಚಳ್ಯಾಗ ಹೊರಗ ಹೊರಟರ, ಇನ್ನೂ ಸಣ್ಣಾಕಿ ಇದ್ದೀದಿ, ಇನ್ನೂ ಸ್ವಲ್ಪ ಮಲಕೊ ಅನ್ನುವಂಥ ಅತ್ತೀನ್ನ ಹುಡುಕ-ತೇನಿ. " ಬಂಗಾರಿ ಅಂದಳು.

" ಇಂಥಾ ಅತ್ತಿ ಸಿಗಬೇಕಾರ ಪುಣ್ಯ ಬೇಕು " ರಾಮು ಅಂದ.

" ನನ್ನ ಪುಣ್ಯ ಹಾಂಗsನ ಅದ ! ನನ್ನದು ಇಲ್ಲದಿದ್ದರೂ ಮಾನ-ಪ್ಪನ ಪುಣ್ಯ ಅದ. ನನ್ನ ತಾಯೀ ಆಶೀರ್ವಾದ ಅದ. ಅಲ್ಲೇನ ಅಪ್ಪಾ ? "

" ರಾಮು, ನಡೆ ಈಗ ಕೆಲಸಕ್ಕೆ ಹೊತ್ತಾಯಿತು " ಸಾಳವ್ವ ಅಂದಳು. ರಾಮು ಹೊರಟ. ಬಂಗಾರಿ ಬಾಗಲದಾಂಗ ನಿಂತಿದ್ದಳು. ಆವ ಹೊರಳಿ ನೋಡಿದ ಇನ್ನೂ ಅಲ್ಲೆ ಇದ್ದಳು. ರಾಮು ಕಾಣದಾಂಗ ಆಗೋತನಕ ಅಲ್ಲೆ ನಿಂತಳು ಮನ್ಯಾಗ ಸಾಳವ್ವ, ಮಾನಪ್ಪ ಇಬ್ಬರ ಇದ್ದರು. ಸಾಳವ್ವನೂ ಹೊರಟಳು. ಮುದುಕ ನಿಲ್ಲಿಸಿದ

" ಸಾಳವ್ವ, ಒಂದು ಸ್ವಲ್ಪ ಕೂಡ್ರು ನಾವು ಸ್ವಲ್ಪ ಮಾತಾಡೋಣು"

" ಮನ್ಯಾಗ ಒಲಿ ಮೇಲೆ ಹಾಲ ಇಟ್ಟೆನಿ, ಉಕ್ಕಿ ಹೋದಿತು "

" ಬಂಗಾರಿಗೆ ಕಳಸೋಣ, ಆಕಿ ಕೆಳಗ ತಗದ ಇಡತಾಳ "

" ಒಳ್ಳೇದು, ಏ, ಬಂಗಾರಿ, ! " ಅವಳು ಒದರಿದಳು.

" ಏನ, ರಾವ ಊನ ತಾಯಿ " ಅವಳು ಬಂದು ಕೇಳಿದಳು.

" ನಮ್ಮ ಮನಿಗೆ ಹೋಗಿ ಒಲಿ ಮೇಲೆ ಇಟ್ಟ ಹಾಲು ಕೆಳಗೆ ತೆಗೆದು ಇಡು ಅದನ್ನ ಮುಚ್ಚಿ ಇಡು ರೊಟ್ಟೇನೂ ಹಾಂಗ ಹೊರಗ ಅವ. ಅದನ್ನೂ ಮುಚ್ಚಿಡು. ಮತ್ತ ಈಗ ಬರತೇನಿ ಅಂತ ನಮ್ಮ ಹಿರ್‍ಯಾಗ ಹೇಳು ಬೇಕಾರ ಒಂದು ಸ್ವಲ್ಪ ಚಹಾ ಮಾಡಿಕೊಡು ಅವರಿಗೆ. ಇತಲಾಗ ಅವರಿಗೆ ಸ್ವಲ್ಪ ದಮ್ಮ ಬರತದ. ಚಹಾ ಮಾಡಲಿಕ್ಕೆ ಬರತದಲ್ಲ ?" ಸಾಳವ್ವ ಕೇಳಿದಳು

" ಬರತದ ಎಲ್ಲಾ ಮಾಡಿ ಬರತೇನಿ ಹೋಗತೇನಿ ಅಪ್ಪಾ." ಎಂದು ಅವಳು ಹೋದಳು. ಈಗ ಅವರಿಬ್ಬರೆ ಇದ್ದರು ಮನಸು ಬಿಚ್ಚಿ ಮಾತಾಡಲಿಕ್ಕೆ ಅಡ್ಡಿ ಇರಲಿಲ್ಲ.

" ಏನದು ಮಾನಪ್ಪ ? " ಸಾಳವ್ವ ಕೇಳಿದಳು.

" ಬಂಗಾರಿ, ದೊಡ್ಡಾಕಿ ಆದಳು. ಆಕಿ ಮದುವೆ ಮಾಡಬೇಕಲ್ಲ ? "

" ಹೌದು ಮಾಡಬೇಕು. ನಾನು ಮಾಡಿ ಬಿಡಿರಿ ಅಂತ ಹೇಳಾಕಿ ಇದ್ದೆ. ಆದರ ನಿಮಗ ಕೆಟ್ಟ ಅನಿಸೀತು ಅಂತ ಹೇಳಲಿಲ್ಲ. ಬಂಗಾರಿ ಅತ್ತಿ ಮನೆಗೆ ಹೋದರೆ ನೀವು ಒಬ್ಬರ ಆಗತೀರಿ ಅವಳನ್ನಗಲುವ ವಿಚಾರ ಸಹ ನಿಮಗ ಸಹನ ಆಗಲಿಕ್ಕಿಲ್ಲ. ಆದರ ಆಕಿ ಮದುವೆ ಮಾಡಬೇಕು ಎಲ್ಲಾನೂ ವೇಳ್ಯಾಕ್ಕೆ ಸರಿಯಾಗಿ ಆಗಬೇಕು ಅಲ್ಲ ? "

" ಹೌದು. ಇತ್ತೀಚಿಗೆ ನನ್ನ ಮನಸಿನ್ಯಾಗ ಒಂದು ವಿಚಾರ ಬಂವದ. ಆದರ ನಾನು ಮುಪ್ಪಿನವ ವರಾ ನೋಡಲಿಕ್ಕೆ ಎಲ್ಲಿ ಹೋಗಲಿ ? ನಿಮಗ ಗೊತ್ತಿದ್ದ ವರಾ ಅವ ಏನು ಎಲ್ಯಾರ ? "

" ಹಾಂಗೇನು ಈಗ ಕಣ್ಣ ಮುಂದ ಇಲ್ಲ ಆದರೆ ಬಂಗಾರಿಗೆ ಚಲೋ ವರ ನೋಡಬೇಕು ಬಡವರ ಮನ್ಯಾಗ ಏನು ಕೊಡೊದಿಲ್ಲ ಆಕಿಗೆ?

ಈಗೇನು ನಿಮ್ಮ ಬಂಗಾರವ್ವಾ ಸಿಕ್ಕsದ. ಈಗೇನು ನೀವು ಖರ್ಚು ಮಾಡೋ ಹಾಂಗ ಇದ್ದೀರಿ. ಬಂಗಾರಿಗೆ ಚಲೋ ಮನಿ ನೋಡಬೇಕು. ನಾಲ್ಕು ವಸ್ತ್ರ ವೈಮೇಲಿ ಇರಬೇಕು. ಆದರ ಇಂಥ ವರ ನಮಗ ಹ್ಯಾಂಗ ಗೊತ್ತಾಗ ಬೇಕು ? ನಾವು ಬಡವರು. ಅಲ್ಲ ಮಾನಪ್ಪ ? "

" ಬಂಗಾರಿಗೆ ಗಂಡ ಚಲೋ ಸಿಕ್ಕರ ಸಾಕು, ನಮಗ ಜನರು ಚಲೋ ಬೇಕು. ಬಡವ-ನೆತನ ಇದ್ದರೂ ಅಡ್ಡಿ ಇಲ್ಲ. ಮನಸಿನ ದೊಡ್ಡಿಸ್ತನ ಇದ್ದವರು ಬೇಕು. ಬಂಗಾರಿಗೆ ನಾನು ಪ್ರೀತಿಯಿಂದ ಜೋಪಾನ ಮಾಡಿದೆ. ಅಚ್ಚಾಡಿಂದ ಮಾತಾಡತಾಳ. ಆಕಿಗೆ ಅಚ್ಚಾಡಿಂದ ನೋಡವವರು ಬೇಕು. ದುಡ್ಡು ಏನು ತಿನ್ನೋದ ಅದ. ನಮ್ಮ ಬಂಗಾರಿಗೆ ? ವಸ್ತ್ರದ್ದೇನು ಅಷ್ಟು ಇಚ್ಛಾ ಇಲ್ಲ. ಆಕಿಗೆ ಎರಡು ಹೂವು ಮುಡಿಯಲಿಕ್ಕೆ ಇದ್ದರ ಸಾಕು ಅಂತಾಳ. ಇಂಥಾ ಮನಿ ನಿಮಗ ಗೊತ್ತದೇನು? ಬಡವರಿದ್ದರೂ ಅಡ್ಡಿ ಇಲ್ಲ."

"ಒಳ್ಳೇದು, ನೋಡಿ ಹೇಳತೇನಿ. "

" ಈಗ ಹೇಳೋದು ಸಾಧ್ಯ ಇಲ್ಲ ? "

" ಒಮ್ಮೆಲೆ ಹ್ಯಾಂಗ ಹೇಳಲಿಕ್ಕೆ ಬರತದ, ಮಾನಪ್ಪ ' "

" ಕಣ್ಣೆದುರಿಗೆ ಇದ್ದರ ಹೇಳರಿ "

" ಅದು ಹ್ಯಾಂಗ ಹೇಳಲಿ ? "

" ಸಾಳವ್ವ, ನಾ ಒಂದು ಮಾತು ಕೇಳಲ್ಯಾ ? "

" ಕೇಳರಿ. "

" ನೀವ ನನ್ನ ಬಂಗಾರಿನ್ನ ಸೂಸಿ ಮಾಡಕೊತೀರಿ ? ನಿಮ್ಮ ರಾಮೂಗೆ ಬಂಗಾರಿನ್ನ ಕೊಡಬೇಕು ಅಂತ ನನ್ನ ಮನಸಿನ್ಯಾಗ ಅದ. ಒಮ್ಮೆಲೆ ಕೇಳಲಿಕ್ಕೆ ಧೈರ್ಯ ಆಗಲಿಲ್ಲ. ಕೇಳಬೇಕು, ಕೇಳಬೇಕು ಅಂತಿದ್ದೆ ಇವತ್ತ ಧೈರ್ಯ ಮಾಡೀನಿ. ಏನು ಅನ್ನೋದು ಹೇಳರಿ. "

" ಇದೆಂಥ ಮಾತು ಆಡಿದಿರಿ ನೀವು ? "

" ಇದೆಂಥ ಮಾತಲ್ಲ ಏನಿಲ್ಲ. ನಿಜವಾಗಿ ಕೇಳತೇನಿ. ನನಗೆ ಅಂಜಿಕೆ ಅನಿಸೋದು ಒಂದ ಅಂದಂದರ ಬಂಗಾರಿ ಯಾರ ಮಗಳೋ ಏನೋ

ಎಂಬ ಸಂಶಯು ನಿಮ್ಮ ಮನಸಿನ್ಯಾಗ ಬಂದೀತು ಅನ್ನೋವು. ಅವಳು ಒಬ್ಬ ಅನಾಥ ಸ್ತ್ರೀಯ ಮಗಳು. ಅವಳ ತಾಯಿತಂದೆಯರದು ಪತ್ತೆ ಇಲ್ಲ. ಈ ಮಾತು ನಿಮ್ಮ ಮನಸಿನಲ್ಲಿ ಬರಬಹುದೆಂದು ನನಗೆ ಅಂಜಿಕೆ. ಅದಕ್ಕೆ ನಿಮಗೆ ಕೇಳಲಿಕ್ಕೆ ಧೈರ್ಯ ಸಾಲತಿದ್ದಿಲ್ಲ. ಸಾಳವ್ವ, ನಿಮ್ಮ ಮನಸಿನ್ಯಾಗ ಇಂಥಾದೇನು ಬರಲಿಕ್ಕಿಲ್ಲ ಅಂತ ಅನಸತದ. ನಿಮ್ಮ ಮನಸು ದೊಡ್ಡದು, ನಿಮ್ಮ ಹೃದಯ ಉದಾರ. ಹಾಂಗಿಲ್ಲದಿದ್ದರ ನೀವು ಬಂಗಾರಿಗೆ ಕೈನ್ಯ ಹಚ್ಚತಿದ್ದಿಲ್ಲ. ನೀವು ಆಗೆ ಹೆಳ್ಳೊ ಹಾಕತಿದ್ದಿಲ್ಲ, ಎರೀತಿದ್ದಿಲ್ಲ. ಆಕಿಗೆ ಊಟಕ್ಕ ಕರಿಯುತ್ತಿದ್ದಿಲ್ಲ ಈಗ ನಿಮ್ಮ ಮನೆಗ ಕಳಿಸಿಕೊಟ್ಟಿರಿ ಹಾಲ ತಳಗ ಇಡಲಿಕ್ಕೆ ಹೇಳಿದಿರಿ, ರೊಟ್ಟಿ ಮುಚ್ಚಿಡಲಿಕ್ಕೆ ಹೇಳಿದಿರಿ. ನಿಮ್ಮ ಗಂಡಗ ಚಹಾ ಮಾಡಿ ಕೊಡು ಅಂತ ಹೇಳಿದಿರಿ. ನೀವೇನು ಬಂಗಾರಿಗೆ ಕೇಳು ಎಂದ ಭಾವಿಸುವದಿಲ್ಲ. ಆದರೆ ಇದೆಲ್ಲ ಮಾಡೋದು ಬ್ಯಾರೆ, ನಾಳೆ ಆಕಿನ್ನ ಸೊಸಿ ಅಂತ ಮಾಡಿಕೊಳ್ಳೋದು ಬ್ಯಾರೆ ಜಗತ್ತು ಟೀಕಿಸಬಹುದು ಬಳಗದವರು ಹೆಸರು ಇಡಬಹುದು ಇದೆಲ್ಲ ನೋಡಬೇಕಾಗತದ ಆದರ ನೀವೆಲ್ಲ ಈ ಮಾತಿಗೆ ಅಷ್ಟ ಮಹತ್ವ ಕೊಡಲಿಕ್ಕಿಲ್ಲ ಅಂತ ಅನಸತದ. ಹೇಳರಿ, ನಿಮಗೆ ಅನಿಸಿದ್ದನ್ನ ಹೇಳರಿ ರಾಮೂ, ಬಂಗಾರಿ ಇಬ್ಬರೂ ಒಬ್ಬರಿಗೊಬ್ಬರು ಯೋಗ್ಯರಿದ್ದಾರೆ. ಅವರು ಪರಸ್ಪರರನ್ನು ಪ್ರೀತಿಸುತ್ತಾರೆ. ಅವರ ಸಂಸಾರ ಸುಖದ್ದಾಗುವದು ನಿಮ್ಮಂಥ ಅತ್ತಿ ಸಿಗಬೇಕಾರ ಪುಣ್ಯ ಬೇಕು ಈ ಮುದುಕನ ಕನಸು ಖರೇ ಮಾಡ್ರಿ. ನನ್ನ ಮನಸಿನ್ಯಾಗ ಮಾಡಿದ ಬಹುದಿವಸದ ವಿಚಾರ ಪೂರೈಸಿರಿ ನಿಮ್ಮ ಕೈಯಾಗ ಅದ ಎಲ್ಲ ರಾಮೂನ ಅಪ್ಪ ತಯಾರಾಗತಾನ, ನೀವು ತಯಾರಿದ್ದರ ಸಾಕು, ಸಾಳವ್ವ

" ಮಾನಪ್ಪ ಬಂಗಾರಿಯು ಜಾತಿ, ಹುಟ್ಟು ಇವೆಂದೂ ನನ್ನ ಮನಸಿನಲ್ಲಿ ಬಂದಿಲ್ಲ ರಾಮೂ ಇದ್ದಾಂಗ, ಆಕಿ ನನಗ ಖರೇ ಹೇಳಲಿ ಏನು ? ನನ್ನ ಮನಸಿನ್ಯಾಗ ಈ ವಿಚಾರ ಬಹಳ ದಿವಸದಿಂದ ಅದ. ಅವರು ಆಡುವಾಗ ಎಷ್ಟೊ ಸಾರೆ ಇಕಿನ್ನ ಸೊಸಿ ಮಾಡಿಕೊಳ್ಳಬೇಕು ಅಂತ ವಿಚಾರ ನನ್ನ ಮನಸಿನ್ಯಾಗ ಬರತಿದ್ದವು. ಅವರು ಸಣ್ಣವರಿದ್ದಾಗ ಆಡತಿದ್ದರು. ಬಂಗಾರಿ ಸುಳಸುಳ್ಳರೊಟ್ಟಿ ಬಡಿಸಬೇಕು. ಒಂದುದಿನ ರಾಮೂನ ಸಂಸಾರ ಇಕಿ ನಡಿಸಿ ಅವಗ ಬರೇ ರೊಟ್ಟಿ ನೀಡಬಹುದು, ಅಂತ ಅನಕೊತ್ತಿದ್ದೆ ಆಗಳೆ ನಾ

ಬಂದೆ, ಬಂಗಾರಿ ರೊಟ್ಟಿ ಸೇಡಕಿದ್ದಳು. ಅದನ್ನ ನೋಡಿ ಎಷ್ಟು ವಿಚಾರ ಮನಸಿನ್ಯಾಗ ಬಂದವು. ಎದೆ ತುಂಬಿ ಬಂತು. ಇಬ್ಬರ ಮದುವೆ ಆಗ್ಯದೋ ಏನೋ ಅನಿಸಿತು ಆದರ ನಿಮ್ಮ ಬಂಗಾರದ ನಾಣ್ಯ ಸಿಕ್ಕ ದಿವಸ ನನಗ ಸ್ವಲ್ಪ ಕೆಟ್ಟನಿಸಿತು ಈಗ ಏನು ಮಾನಪ್ಪ ಶ್ರೀಮಂತ ಆದರು ಇನ್ನೇನು ಬಂಗಾರಿ ಮದುವೆ ಒಳೆ ಜೋರಲೆ ಮಾಡತಾರ ದೊಡ್ಡ ಮನೆತನ ನೋಡ-ತಾರ ನಾ ಹ್ಯಾಂಗ ಬಂಗಾರಿ ಸೊಸಿಯಾಗಲಿ ಅಂತ ಕೇಳಲಿ ? ನಾವು ಬಡವರು. ನಮಗ್ಯಾಗ ವಸ್ತ್ರ, ಹೊಸ ಚಲೊ ಚಲೊ ಅರಿವಿ ಹಾಕೋದು ಸಾಧ್ಯ ? ನಮ್ಮ ಕಡೆ ಹುರುಕಬರಕ ಅರಿವೆ ಮತ್ತ ರೊಟ್ಟಿ. ಕೆಲಸಕ್ಕ ಆಳಿಲ್ಲ. ನಾ ಹ್ಯಾಂಗ ಕೇಳಲಿ? ನಾನು ನನ್ನ ಮೇಲೆ ಸಿಟ್ಟಾದೆ. ನನ್ನ ಮಗನಿಗೆ ಚಲೋ ಹೆಣತಿ ಸಿಗಬೇಕೆಂಬ ಸ್ವಾರ್ಥ ನನಗ್ಯಾಕ ? ಬಂಗಾರಿ ಚಲೋ ಮನೆತನದಲ್ಲಿ ಬೀಳಲಿ ಅಂದೆ. ಅವಳೇಕೆ ದುಡಿಯುಬೇಕು ? ಅರ ಕೈ ಮುಸರಿ ಯಾಕ ತಿಕ್ಕಬೇಕು, ಅರಿವಿ ಯಾಕ ಒಗೆಯುಬೇಕು ? ಮಾನಪ್ಪನಿಗೆ ರೊಕ್ಕ ಸಿಕ್ಕದ. ಚಲೊ ಆತು. ಬಂಗಾರಿ ಭಾಗ್ಯ ಚಲೋದು ನನಗ ಆನಂದ ಆಗೋದು ಬಿಟ್ಟು ದುಃಖ ಆಯಿತು. ನನಗ ನಾಚಿಗೆ ಬಂತು. ಮತ್ತೊಮ್ಮೆ ಇಂಥ ಸ್ವಾರ್ಥವುಳ್ಳ ವಿಚಾರ ಬರಬಾರದು ಅಂದುಕೊಂಡೆ. ಮಾನಪ್ಪ ನೀವು ನಿಜವಾಗಿ ನಮ್ಮ ರಾಮೂಗ ಬಂಗಾರಿ ಕೊಡಬೇಕು ಅಂತೀರಿ ? ”

“ ನಿಜವಾಗಿ, ಬಂಗಾರಿ ತಾಯಿ ಆಣೆಯಂದರ ನಿಜವಾಗಿ. ಮದುವೆ ಯಂಥ ಪವಿತ್ರ ಮಾತು. ನಾನು ಚೇಷ್ಟೆ ಮಾಡುವದು ಸಾಧ್ಯವೇ ? ” ಹಾಗಾದರೆ ನಿಶ್ಚಯವಾಯಿತಲ್ಲ ? ”

“ ನಿಮ್ಮ ಮನಸಿದ್ದರೆ ನಿಶ್ಚಯವಾಯಿತು. ನಾನೇನು ಇಲ್ಲ ಅನ್ನುವ ದಿಲ್ಲ. ನನ್ನ ರಾಮೂನ ಭಾಗ್ಯ. ನನ್ನ ಹಿಂದಿನ ಜನ್ಮದ ಪುಣ್ಯ ಅಂತ ಇಂಥ ಸೊಸಿ ಸಿಗತಾಳ. ”

“ ಹಾಂಗಾರ ಸಕ್ಕರಿ ತಿಂದು, ಬಾಯಿ ಸವಿಯಾಗಲಿ. ”

“ ಎಲ್ಲಿದೆ ಸಕ್ಕರಿ. ”

“ ಸಕ್ಕರಿ ಯಾತಕ್ಕ ? ” ಬಂಗಾರಿ ಒಮ್ಮೆಲೆ ಬಂದು ಕೇಳಿದಳು.

" ನೀ ಬಂದಿ ಏನು ? ರಾಮನ ತಾಯಿಗೆ ಸಕ್ಕರಿ ಕೊಟ್ಟು ಬಾಯಿ ಸೀ ಮಾಡು. " ಮಾನಪ್ಪ ಅಂದ.

" ಕಹಿ ಯಾತರ್ಲೆ ಆಯಿತು ? ತಗೊಳ್ಳರಿ ಸಕ್ಕರಿ. " ಬಂಗಾರಿ ಸಕ್ಕರಿ ಕೊಟ್ಟಳು.

" ನೀನೂ ತಿನ್ನು. ಮಾನಪ್ಪನವರಿಗೂ ಕೊಡು. "

" ಇದೇಕೆ ಸಕ್ಕರಿ ? "

" ಅದು ನಿನಗೆ ಹಿಂದಾಗಡೆ ತಿಳಿತದ. ಹೋಗತೇನಿ. "

ಸಾಳವ್ವ ಹೋದಳು. ಮಾನಪ್ಪ ಬಂಗಾರಿಗೆ ಎಲ್ಲ ಹೇಳಿದ. ಅವಳಿಗೆ ಆನಂದವಾಯಿತು ಅವಳು ಕುಣಿದಳು. ಮುಖ ಅರಳಿತು. ಕಣ್ಣು ಎಷ್ಟು ಸುಂದರ ಕಾಣುತ್ತಿದ್ದವು !

ಸಂಜೆಯಾಯಿತು. ರಾಮು ಇನ್ನು ಕೆಲಸದ ಮೇಲಿಂದ ಬಂದಿಲ್ಲ. ಬಂಗಾರಿ ಅವರ ಮನೆಗೆ ಹೋಗಿದ್ದಳು. ಆದರೆ ರಾಮು ಕಾಣಲಿಲ್ಲೆಂದು ಕೆಟ್ಟನಿಸಿತು. ಎಲ್ಲಿ ಹೋಗ್ಯಾನ ರಾಮೂ ? ತೋಟದಾಗ ಹೋಗ್ಯಾನ ಏನು? ಆದರ ಮನೆಗೆ ಬರದ ಎಲ್ಲಿ ಹೋಗತಾನ ? ನನ್ನ ಕರೆದು ಆ ಮೇಲೆ ಹೋಗ-ತಾನ. ಇವತ್ತ ಒಬ್ಬನ ಹೋದನೇನು ? ಬಂಗಾರಿ ಮತ್ತೆ ತಿರುಗಿ ಹೋದಳು. ತೋಟದ ಕಡೆ ಹೋದಳು ರಾಮೂ ನೀರ ಹಾಕತಿದ್ದ ಅವಳೂ ಹಾಕ-ಲಿಕ್ಕೆ ಹತ್ತಿದಳು. ಅವಳು ಕೆಲವು ಹೂ ಹರಕೊಂಡಳು.

" ನಡೆ ರಾಮೂ, ನನ್ನ ತಾಯಿ ಸ್ಥಳಕ್ಕೆ ಹೋಗುವ. "

" ನಡೆ. "

ಇಬ್ಬರೂ ಆ ಪವಿತ್ರ ಸ್ಥಳಕ್ಕೆ ಹೋದರು ಮಂದಗಾಳಿಯು ಬೀಸು ತ್ತಿತ್ತು. ಗಿಡಗಳು ಅತ್ತಿತ್ತ ತೂಗುತ್ತಿದ್ದವು. ಆಕಾಶದಲ್ಲಿ ತೆರತೆರದ ಬಣ್ಣ-ಗಳು ತೋರುತ್ತಿದ್ದವು " ರಾಮೂ, ನೀ ಹೀಂಗ್ಯಾಕ ಇದ್ದಿ ಇವತ್ತ ? "

" ಹಾಂಗಾರ ಹ್ಯಾಂಗ ಇರಬೇಕು ? "

" ಆನಂದದಿಂದ ಇರಬೇಕು, ನಗಬೇಕು, ನನ್ನನ್ನು ನಗಿಸಬೇಕು. "

" ಬಂಗಾರಿ, ಈ ತೋಟ ನಾವ ಅರಳಿಸಿದೆವಲ್ಲ ? "

" ಹೌದು, ಎಷ್ಟು ಚಂದ ಕಾಣಸತದ. "

"ಆದರೆ ಈ ರಾಮೂನ ಜೀವನದ ತೋಟ ಅರಳುವದೆಂದು ? ಎಷ್ಟು ದಿನ ಹಾದಿ ಕಾಯಬೇಕು !"

"ರಾಮೂ !"

"ಏನು ?"

"ಹೇಳಲ್ಯಾ ? ನಮ್ಮ ಮದುವೆ ನಿಶ್ಚಯವಾಯಿತು. ಇವತ್ತ ನಿನ್ನ ತಾಯಿ ಮತ್ತು ನಮ್ಮ ಅಪ್ಪ ನಿಶ್ಚಯ ಹಾಕಿದರು ಸಕ್ಕರಿ ಹಂಚಿ ಆಯಿತು. ಇದು ನೋಡು ನಿನಗಾಗಿ ಸಕ್ಕರಿ ತಂದೇನಿ. ನಿಮ್ಮ ಮನೆಗೆ ಹೋಗಿದ್ದೆ. ನೀ ಇದ್ದಿಲ್ಲ. ತಗೋ ಈ ಸಕ್ಕರಿ ಮತ್ತ ಬಾಯಿ ಸೀ ಮಾಡು. ಇನ್ನೇನು ನಮ್ಮ ಜೀವನದ ತೋಟ ಅರಳುವದು ಸಿಟ್ಟಾಗಬೇಡ ತಗೊ."

"ನೀನ ಬಾಯಾಗ ಹಾಕು."

"ಒಳ್ಳೇದು."

ಬಂಗಾರಿ ರಾಮೂನ ಬಾಯಾಗ ಸಕ್ಕರಿ ಹಾಕಿದಳು ಇಬ್ಬರಿಗೂ ಅಪಾರವಾದ ಆನಂದವಾಯಿತು. ಅವಳ ಕೈ ಅವನು ಹಿಡಿದಿದ್ದ. ಇಬ್ಬರು ಸುಮ್ಮನಿದ್ದರು.

"ರಾಮೂ, ನನ್ನ ತಾಯಿ ಪೂಜಾ ಮಾಡೋಣು."

"ನಡೆ."

ಇಬ್ಬರೂ ಆ ಪವಿತ್ರ ಸ್ಥಳದ ಮೇಲೆ ಹೂವು ಇಟ್ಟರು ನಮಸ್ಕಾರ ಮಾಡಿದರು.

"ಅವ್ವಾ, ನಮಗೆ ಆಶೀರ್ವಾದ ಕೊಡು. ನಮ್ಮ ಪ್ರೀತಿ ಅಭಂಗವಿರಲಿ." ಇಬ್ಬರೂ ಹೊರಟರು ರಾಮು ಒಂದು ಹೂವು ತೆಗೆದು ಬಂಗಾರಿಯ ಹೆರಳಲ್ಲಿ ಚುಚ್ಚಿದನು. ಅವಳೂ ಒಂದು ಹೂವು ತೆಗೆದು ಅವನ ಕಿವಿಯ ಮೇಲಿಟ್ಟಳು ಇಬ್ಬರೂ ಒಬ್ಬರಿಗೊಬ್ಬರು, ತಮ್ಮ ನಿರ್ಮಲವಾದ ಪ್ರೀತಿಯಿಂದ ತುಂಬಿದ ತಮ್ಮ ಹೃದಯಗಳನ್ನು, ತಮ್ಮ ಜೀವನವನ್ನೇ ಅರ್ಪಿಸಿದರು.

ಬಂಗಾರಿ-ರಾಮೂನ ಮದುವೆ ನಿಶ್ಚಯವಾಯಿತು. ರಾಯಗಾವ ತುಂಬೆಲ್ಲ ಸುದ್ದಿ ಹಬ್ಬಿತು. ರಾಮೂನ ಭಾಗ್ಯ ದೊಡ್ಡದು ಅಂದರು ಎಲ್ಲರೂ ಸಂಪತರಾಯ ಮತ್ತು ಇಂದುಮತಿಯವರ ಕಿವಿಗೂ ಈ ಮಾತು ಮುಟ್ಟಿತು.

ಅವರು ಮಾನಪ್ಪನ ಮನೆಗೆ ಬಂದರು. ಬಂಗಾರಿ ಅವರನ್ನು ಬರಮಾಡಿ-ಕೊಂಡಳು.

" ಬಂಗಾರಿ ನಿನ್ನ ಮದುವೆ ನಿಶ್ಚಯವಾಯಿತಲ್ಲವೇ ? " ಇಂದುಮತಿ ಕೇಳಿದಳು.

" ಹೌದು, ರಾಮುನೊಡನೆ ನಿಶ್ಚಯಿಸಿದೆ. " ಮಾನಪ್ಪ ಅಂದ

" ಇಷ್ಟ್ಯಾಕ ನಾಚತಿ ಬಂಗಾರಿ ? ಬಾ, ನನ್ನ ಹತ್ತರ ಬಾ. " ಸಂಪತ ರಾಯ ಕರೆದರು. ಅವಳು ಅವರ ಹತ್ತರ ಹೋದಳು. ಅವರು ಬೆನ್ನ ಮೇಲೆ ಕೈಯಾಡಿಸಿದರು. ತಲೆಯ ಮೇಲೆ ಕೈಯಾಡಿಸಿದರು

" ಮಾನಪ್ಪ, ನನ್ನದೊಂದು ಪ್ರಾರ್ಥನೆ ಇದೆ. ನೀವು ಅದನ್ನು ಕೇಳಲೇ ಬೇಕು. ಈ ಮದುವೆಯ ಎರಡೂ ಕಡೆ ಖರ್ಚು ನಾನೇ ನೋಡಿಕೊಳ್ಳು-ವೆನು. ಈ ಮದುವೆ ನಾನು ಮಾಡಿಕೊಡುವೆನು. ಈಗಾದರೂ ಈ ನಿರಾಶ ಪಿತೃಹೃದಯದ ಇಚ್ಛೆಯನ್ನು ನೀವು ಪೂರೈಸುವಿರಾ ? ಬಂಗಾರಿ ಇಲ್ಲ ಅನಬೇಡ. ಕಠೋರರಾಗಬೇಡ " ಸಂಪತರಾಯರು ನಡುಗುವ ದನಿಯಿಂದ ಅಂದರು.

" ನಿಮ್ಮ ಇಚ್ಛೆಯಂತೆ ಆಗಲಿ " ಮಾನಪ್ಪ ಅಂದ.

" ನಿನ್ನ ಅಂಬೋಣ ಏನಿದೆ ಬಂಗಾರಿ ? " ಸಂಪತರಾಯರು ಕೇಳಿದರು

" ನನ್ನ ವಿರೋಧವಿಲ್ಲ. ನಿಮ್ಮ ಹೃದಯದ ಅರಿವು ನನಗಿದೆ. ಅದರ ದುಃಖ ನನಗೆ ತಿಳಿಯುತ್ತದೆ. ನೀವೂ ನನ್ನವರೇ. ಮಾನಪ್ಪನು ನನ್ನವನೇ. " ಬಂಗಾರಿ ಅಂದಳು.

ಸಂಪತರಾಯ ಇಂದುಮತಿಯರಿಗೆ ಆನಂದವಾಯಿತು. ಮುಹೂ-ರ್ತವು ನಿಶ್ಚಯಿಸಲಾಯಿತು. ಬಹು ವಿಜೃಂಭಣೆಯಿಂದ ಮದುವೆಯಾಯಿತು. ಊರಿಗೆಲ್ಲ ಊಟ. ಎಲ್ಲರೂ ಆಶೀರ್ವಾದವನ್ನು ಮಾಡಿದರು. ಬಂಗಾರಿ ರಾಮೂ ಸಂಪತರಾಯ ಇಂದುಮತಿಯವರ ಕಾಲು ಬಿದ್ದರೂ ಅವರಿಗೆ ಆಶೀರ್ವಾದ ಮಾಡಿದರು. ಮಾನಪ್ಪ ಇಬ್ಬರನ್ನೂ ಅಪ್ಪಿಕೊಂಡ. ಸಾಳವ್ವ ಸಖಾರಾಮ ವಧೂವರರನ್ನು ಹರಿಸಿದರು. 'ಬಂಗಾರಿ, ಈ ಊರಲ್ಲಿ

ಮುಪ್ಪಿನ ಘೋಂಡಪ್ಪ ಇದ್ದಾನ, ಅವನಿಗೆ ನಮಸ್ಕಾರ ಮಾಡಿಬರ್ರಿ. ಈ ಊರೊಳಗೆ ಅವರು ಎಲ್ಲಕ್ಕಿಂತ ಹಿರಿಯರು. ಅವರಿಗೆ ನಿಮ್ಮನ್ನು ನೋಡಿ ಆನಂದವಾಗುವದು' ಸಖಾರಾಮ ಅಂದನು

ವಧೂವರರಿಬ್ಬರೂ ಘೋಂಡಪ್ಪನಲ್ಲಿ ಹೋದರು ಅವರು ಬಾಗಿಲದಲ್ಲಿದ್ದರು. ಅವರ ಕಾಲಬಿದ್ದರು ಅವರು ಆಶೀರ್ವಾದ ಮಾಡಿ ಅಂದರು, "ರಾಮೂನ ಅಪ್ಪಗ ಈ ಮದುವೆ ಆಗತದ ಎಂದೋ ಹೇಳಿದ್ದೆ. ಮುದುಕನ ಮಾತು ಹುಸಿಹೋದಾವ' ನಮ್ಮ ಕಣ್ಣು ಮಸಗಾದರೂ ದೂರಿಂದ ಕಾಣಿಸತದ. ನಗತೀರೇನು ? ಸುಖದಿಂದ ಬಾಳುವೆ ಮಾಡಿರಿ ಹಿರಿಯರ ಮಾನ ಕಾಯಿರಿ. ಸೇವೆ ಮಾಡಿರಿ ತಿಳಿಯಿತೇ ? "

ರಾಮು-ಬಂಗಾರಿ ತೋಟಕ್ಕೆ ಹೋದರು. ತಾಯಿಯ ಪವಿತ್ರ ಸ್ಥಳದ ಹತ್ತಿರ ನಿಂತರು. ಆ ಸ್ಥಳದ ಮೇಲೆ ಹೂವಿಟ್ಟು ಪ್ರಣಾಮ ಮಾಡಿದರು.

" ತಾಯೀ ನಮಗೆ ಆಶೀರ್ವಾದ ಮಾಡು " ಇಬ್ಬರೂ ಅಂದರು.

" ಬಂಗಾರಿಯ ತಾಯೀ ನನಗೂ ಕ್ಷಮಿಸು." ಸಂಪತರಾಯನು ಅಂದರು. ಅವರು ಸಪ್ಪಳಿಲ್ಲದೆ ಹಿಂದೆ ಬಂದು ನಿಂತಿದ್ದರು ಅವರಿಗೆ ಕಣ್ಣೀರು ಬಂದವು ಅವರೂ ಪ್ರಣಾಮ ಮಾಡಿದರು.

" ರಾಮು, ಬಂಗಾರಿ ನಾನು ಹೊರಗಿನವನೆಂದು ಭಾವಿಸಬೇಡಿರಿ ನನ್ನ ತೋಟದಲ್ಲಿಯ ಹೂವು, ಹಣ್ಣು, ಎಲ್ಲವೂ ನಿಮ್ಮವೇ ಇವೆ ನನ್ನ ಮನೆಯಲ್ಲಿದ್ದದ್ದೆಲ್ಲ ನಿಮ್ಮದೇ ಅದೆ. ಹಕ್ಕಿನಿಂದ ತಗೊಳ್ಳಿರಿ. ಅದರಲ್ಲಿದೆ ನನಗೆ ಆನಂದ. ಈ ಪವಿತ್ರ ಸ್ಥಳದಲ್ಲಿ ನಿಂತು ನಾನು ಈ ಮಾತು ಹೇಳುತ್ತೇನೆ. " ಸಂಪತರಾಯರು ಅಂದರು

" ಒಳ್ಳೇದು, ಅಪ್ಪ. " ಬಂಗಾರಿ ಅಂದಳು.

ಸಂಪತರಾಯರು ಹೊರಟು ಹೋದರು. ರಾಮು, ಬಂಗಾರಿ ಸಾವಕಾಶ ಹೋದರು.

---

# ಪ್ರಕರಣ ೧೦

## ತಾಯ್ನಾಡಿನ ದರ್ಶನ

ಬಂಗಾರಿ-ರಾಮುನ ಸಂಸಾರ ಪ್ರಾರಂಭವಾಯಿತು. ಮಾನಪ್ಪ ಈಗ ಕೆಲಸ ಮಾಡುವದನ್ನು ಬಿಟ್ಟಿದ್ದ. ಈಗ ಮಗ್ಗದ ಖಟಕ್, ಖಟಕ್ ದನಿ ಬಂದಾಗಿತ್ತು ಅವನ ಜೀವನವಸ್ತ್ರದ ನೇಯಿಗೆಯು ಮುಗಿಯುತ್ತ ಬಂದಿತ್ತು.

ಒಂದು ದಿನ ಸಂಜೆ ಮಾನಪ್ಪ ಬಂಗಾರಿ ಅಡ್ಡಾಡಲಿಕ್ಕೆ ಹೋಗಿದ್ದರು. ಒಂದು ಬಂಡೆಗಲ್ಲಿನ ಮೇಲೆ ಕೂತಿದ್ದರು. ಬಂಗಾರಿ ಮಾನಪ್ಪನ ಕಾಲ-ದರ್ಶಿಲೆ ಕೂತಿದ್ದಳು.

"ಅಪ್ಪ, ಸೂರ್ಯ ಮುಳುಗಿದ, ಈಗ ಕತ್ತಲೆಯಾಗುವದು."

"ನನ್ನ ಜೀವನ ಸೂರ್ಯನೂ ಬೇಗ ಮುಳುಗುವನು."

"ಹೀಗೇಕೆ ಅನ್ನುತ್ತೀರಿ? ನಮ್ಮ ಬೇಸರಿಕೆಯಾಯಿತೆ ನಿಮಗೆ?"

"ಇಲ್ಲ ಮಗು. ಆದರೆ ಒಂದು ದಿನ ಕರೆ ಬರುವದು. ನನ್ನ ಗುಡಿಸಲದಲ್ಲಿದ್ದ ಮಗ್ಗ ಬಂದಾಯಿತು. ನನ್ನ ಜೀವನ ಮಗ್ಗವೂ ಬಂದಾಗ-ಬಹುದು ನೀವು ಸುಖದಿಂದ ಬಾಳಿರಿ. ಬಂಗಾರಿ, ಈಗ ಮನಸಿನಲ್ಲಿ ಒಂದು ತೀವ್ರ ಇಚ್ಛೆ ಉಂಟಾಗಿದೆ."

"ಯಾವುದದು? ನಾವು ಅದನ್ನು ಪೂರೈಸುವೆವು."

"ಒಮ್ಮೆ ನನ್ನ ಜನ್ಮಭೂಮಿಯ ದರ್ಶನವಾಗಬೇಕೆಂಬ ಇಚ್ಛೆ ಇದೆ. ಬಂಗಾರಿ, ಇಲ್ಲಿ ಬಂದು ೩೫ ವರ್ಷಗಳಾದವು. ನನ್ನ ಜನ್ಮ ಭೂಮಿ ಬಿಟ್ಟು ರಾಯಗಾವಕ್ಕೆ ಬಂದೆ. ನಾನು ಬಂದಾಗ ನನ್ನ ಜೀವನದಲ್ಲಿ ಕಗ್ಗತ್ತಲೆ ತುಂಬಿತ್ತು. ಜಗತ್ತಿನಲ್ಲಿ ನ್ಯಾಯ, ಪ್ರೇಮ, ಸ್ನೇಹ, ಸತ್ಯ, ಧರ್ಮ, ದೇವರು ಇಲ್ಲ ಎಂದೇ ನನಗನಿಸಿತ್ತು. ನಾನು ತಾಯ್ನಾಡು ಬಿಟ್ಟೆ ಅದರ ವಿಚಾರ ಸಹ ತಲೆದೋರಲಿಲ್ಲ. ಆದರೆ ನೀನು ನನಗೆಲ್ಲ ತಿರುಗಿ ದೊರಕಿಸಿಕೊಟ್ಟೆ.

ನೀನು ನನ್ನ ಜೀವನದಲ್ಲಿ ಪ್ರಕಾಶ ಶ್ರದ್ಧೆಗಳನ್ನು ತಂದಿ ಮತ್ತೆ ಆ ತಾಯ್ನಾಡು ನೋಡಬೇಕು ಅಂತೇನಿ. ಹೋಗಿ ಬರಲ್ಯಾ ? ”

“ ಅಪ್ಪ ಹೇಗೆ ಇದೆ ನಿಮ್ಮ ನಾಡು ? ”

“ ಸುಂದರವಿದೆ. ಸಾಯಗಾವ ಆ ಊರಿನ ಹೆಸರು. ಊರ ಸುತ್ತ ಯಾವಾಗಲೂ ಹರಿಯುವ ಬಹುಲಾ ನದಿ ಇದೆ. ಎಷ್ಟು ನಿರ್ಮಲ ಮತ್ತು ಸವಿಯಾದ ನೀರು! ನಮ್ಮ ಊರಲ್ಲಿ ಬಡೆದಾಟ ಜಗಳಾಟಗಳಿರಲಿಲ್ಲ. ಕೋರ್ಟು ಕಚೇರಿ ಇದ್ದಿಲ್ಲ ಅಲ್ಲಿ ಯಾರೂ ಹೋಗಲಿಲ್ಲ. “ ಇವನೇ ಅಪರಾಧಿ ” ಎಂದು ಊರ ಜನರೆಲ್ಲರೂ ಕೂಡಿ ಗುಡಿಯಲ್ಲಿ ಅಂದರಾಯಿತು. ಎರಡನೆ ಶಿಕ್ಷೆ ಇಲ್ಲ. ಪಾಪ ಮಾಡಿದವನ ಮನಸು ಅವನನ್ನು ಕಟಿಯುತ್ತದೆ. ಬೇರೆ ಶಿಕ್ಷೆ ಯಾಕೆಂದು ಊರ ಜನರು ಅನ್ನುತ್ತಿದ್ದರು. ಮತ್ತೆ ಆ ಊರ ನೋಡಿ ಬರುತ್ತೇನೆ. ಎಂಥ ವಿಶಾಲವಾದ ಬೈಲು, ಮಾವಿನ ತೋಪು, ಸ್ವಚ್ಛ ಸುಂದರವಾದ ಮನೆಗಳು ಹೋಗಿ ಬರಲ್ಯಾ ? ದೇವರಲ್ಲಿ ಹೋಗುವ ಮೊದಲು ತಾಯ್ನಾಡನ್ನು ಕಂಡುಬರವೆ ”

“ ನೀವು ಒಬ್ಬರೇ ಹೋಗುವಿರಾ ? ”

“ ಹೌದು, ನಾನು ಒಬ್ಬನೇ ಹೋಗುವೆ ನನ್ನ ಭಾವನೆ, ನನ್ನ ನೆನಪು. ನಿಮಗೆ ಅವರಲ್ಲಿ ಸ್ವಾರಸ್ಯವೆನಿಸುವಂತಿಲ್ಲ. ಅಲ್ಲವೇ ? ”

“ ಹಾಗಾದರೆ ಹೋಗಿ ಬರ್ರಿ. ನಡಕೋತ ಬೇಡ. ನೀವು ಈಗ ಮುಪ್ಪಿನವರೂ ಅಶಕ್ತರೂ ಇದ್ದೀರಿ. ಗಾಡಿ ಮಾಡಿಕೊಂಡು ಹೋಗಿರಿ. ನೀವು ಇನ್ನು ಬಹುದಿವಸ ನಮಗೆ ಬೇಕು. ”

ಮಾನಪ್ಪ ಸಾಯಗಾವಕ್ಕೆ ಹೋದ. ಆದರೆ ಸಾಯಗಾವ ಈಗ ಮೊದಲಿನದು ಇದ್ದಿಲ್ಲ. ಎಲ್ಲಿದೆ ಆ ಮಾವಿನ ತೋಪು, ಎಲ್ಲಿವೆ ಆ ವಿಶಾಲವಾದ ಬೈಲುಗಳು ? ಎಲ್ಲಿ ನೋಡಿದಲ್ಲಿ ಹೊಗೆ ಕಾರುವ ಚಿಮನಿಗಳು. ಸಾಯಗಾವದಲ್ಲಿ ಉದ್ಯೋಗಗಳು ತುಂಬಾ ಪ್ರಾರಂಭವಾಗಿದ್ದವು. ಎಲ್ಲಿ ನೋಡಿದರು ಗಡಿಬಿಡಿ. ಆ ವಿಶಾಲವಾದ ಬೈಲುಗಳಲ್ಲಿ ಗಿರಣಿಗಳಿದ್ದವು. ಹೊಸ ಹೊಸ ಕಾರಖಾನೆಗಳಾಗಿದ್ದವು. ಮಾವಿನ ತೋಪು ಇದ್ದಲ್ಲಿ ಹೊಸ ಹೊಸ ಮನೆಗಳಾಗಿದ್ದವು. ಅಲ್ಲಲ್ಲಿ ವಕೀಲರ ಫಲಕಗಳು ಕಾಣುತಿದ್ದವು. ಕೋರ್ಟು ಕಚೇರಿ ಪ್ರಾರಂಭವಾಗಿದ್ದವು. ಮಾನಪ್ಪನಿಗೆ ಅವನ ಮನೆ

ಕಾಣಲಿಲ್ಲ. ಅವನ ಗೆಳೆಯ ರಾಮು ಎಲ್ಲಿಯೂ ಕಾಣಲಿಲ್ಲ. ಮಾನಪ್ಪ ಅಲ್ಲೆ ಇಲ್ಲೆ ನೋಡಕೋತ ನಿಂತ. ಯಾರೂ ಗುರುತಿನವರು ಕಾಣಲಿಲ್ಲ. ಯಾರೂ ಅವನ ಗುರುತವನ್ನು ಹಿಡಿಯಲಿಲ್ಲ ಊರೆಲ್ಲ ಅಡ್ಡಾಡಿದನು. ಕೊನೆಗೆ ಬಹುಲಾ ನದಿಗೆ ಹೋದನು. ಊರ ಗಟಾರದ ನೀರೆಲ್ಲ ನದಿಯಲ್ಲಿ ಬಿಟ್ಟಿದ್ದರು ! ಈ ಲೋಕಮಾತೆ, ತನ್ನ ಮಕ್ಕಳ ಹೊಲಸನ್ನೆಲ್ಲ ಹೊತ್ತುಕೊಂಡು ಹೋಗುತ್ತಿದ್ದಳು. ಮಾನಪ್ಪನಿಗೆ ಬಹಳ ಕೆಟ್ಟನಿಸಿತು. ಹಾಗೆ ಅಡ್ಡಾಡುತ್ತ ನದಿಯ ಮೇಲ್ಭಾಗಕ್ಕೆ ಹೋದನು ಎಲ್ಲಿ ನೀರ ಸ್ವಚ್ಛ ಇತ್ತು ಅಲ್ಲಿ ಹೋದನು. ಅಲ್ಲಿ ಕೂತನು. ಬೊಗಸಿಯೊಳಗಿಂದ ನೀರು ಕುಡಿದನು ೩೫ ವರುಷದ ಹಿಂದೆ ನೀರು ಕುಡಿದು ಊರು ಬಿಟ್ಟು ಹೋಗಿದ್ದ. ಮತ್ತೆ ಆ ನೀರು ಕುಡಿದು ಬಹುಲಾ ನದಿಗೆ ಪ್ರಣಾಮ ಮಾಡಿ ಹೊರಟನು. ಸಂಜೆಯಾಗಿತ್ತು. ಕತ್ತಲೆ ಬೀಳಹತ್ತಿತ್ತು. ಮತ್ತೆ ಊರ ಕಡೆ ಬಂದನು. ಊರೆಲ್ಲ ವಿದ್ಯುದೀಪಗಳು ಹೊಳೆಯುತ್ತಿದ್ದವು. ಮಾನಪ್ಪನ ಕಣ್ಣು ಕುಕ್ಕಿದವು. ಸಾಯಗಾವಕ್ಕೆ ಪ್ರಣಾಮ ಮಾಡಿ ತಿರುಗಿ ಹೊರಟನು.

*　　*　　*　　*

ಆ ದಿವಸ ಸಂಜೆ ರಾಮು ಮತ್ತು ಬಂಗಾರಿ ಅಡ್ಡಾಡಲಿಕ್ಕೆ ಹೋಗಿದ್ದರು. ಅತ್ತಕಡೆಯಿಂದ ಯಾರೋ ಬರುವದನ್ನು ಕಂಡರು ಇಬ್ಬರೂ ಓಡುತ್ತ ಹೋದರು.

"ಹೌದು, ಅಪ್ಪನೇ ಹೌದು"

"ನಡಕೋತ ಬರತಾರೆ ?"

ಹೌದು ಅವನು ಮಾನಪ್ಪನಿದ್ದ. ಹೆಗಲ ಮೇಲೆ ಒಂದು ಸಣ್ಣ ಗಂಟಿತ್ತು. ಕೈಯಲ್ಲಿ ಕೋಲು ಇತ್ತು. ಅವನು ಬಗ್ಗಿದ್ದ. ಸಾವಕಾಶ ಬರತಿದ್ದ. ಬಂಗಾರಿ ಓಡಕೋತ ಹೋಗಿ ಗಂಟು ತಗೊಂಡಳು.

"ಅಪ್ಪಾ ನಡಕೊತ ಯಾಕ ಬಂದರಿ ?"

"ಇಲ್ಲ ಗಾಡಿಯೊಳಗಿಂದ ಬಂದೆ. ಊರ ಕಾಣಲಿಕ್ಕೆ ಹತ್ತಿದ ಮೇಲೆ ಇಳಿದೆ. ಗಾಡಿಯವನಿಗೂ ಎರಡನೆ ಕಡೆಗೆ ಹೋಗೋದಿತ್ತು; ಪಾಪ ಅವಗ್ಯಾಕ ಸುತ್ತು ಅಂತ ಇಳಿದೆ. ಈಗ ಸಂಜೆಯಾಗತಾ ಬಂದಿದೆ. ನನಗೂ ಒಬ್ಬಸಿಗೆ ಹೋಗುವದದೆ. ನನ್ನ ಪಾಪಪುಣ್ಯದ ಕೋಲು ಹಿಡಿದು ದೇವರತ್ತ

ಹೋಗುವದದೆ. ಅಲ್ಲವೇ ಮಗು ? ”

“ ಅಪ್ಪಾ, ತಾಯ್ನಾಡಿನಿಂದ ಏನು ತಂದಿರಿ ? ”

“ ಕರ್ತವ್ಯ ಮತ್ತು ಪ್ರೇಮ. ಈ ಎರಡು ವಸ್ತುಗಳನ್ನು ನಾನು ನಿನಗೆ ಕೊಡುತ್ತೇನೆ. ಇದೇ ನನ್ನ ಕೊನೆಯ ಕೊಡುಗೆ. ರಾಮೂ ಬಂಗಾರಿ, ಸುಖದಿಂದ ಬಾಳುವೆ ಮಾಡಿರಿ. ಎಚ್ಚರಿಕೆಯಿಂದ ಇರ್ರಿ. ಸಂಸಾರವೆಂದರೆ ಸರ್ಕಸಿನ ಆಟ ಇದ್ದಂತೆ. ತಂತಿಯ ಮೇಲೆ ನಡೆಯುವದು. ತೂಕ ಇಡ-ಬೇಕಾಗುತ್ತದೆ ಸಂಯಮದ ಛತ್ತರಿಗೆ ಕೈಯಲ್ಲಿರಲಿ. ಪರಸ್ಪರರನ್ನು ಕಾಪಾಡಿರಿ ನೆರೆಹೊರೆಯವರಿಗೆ ಸಹಾಯ್ಯ ಮಾಡಿರಿ. ಜೀನರಾಗಬೇಡಿರಿ. ಆದರೆ ದುಂದುಗಾರಿಕೆಯೂ ಬೇಡ. ಪರಾವಲಂಬಿಗಳಾಗಬೇಡಿರಿ. ಎಲ್ಲವೂ ತೂಕದಲ್ಲಿರಬೇಕು ತೂಕದಲ್ಲಿದೆ ಸೌಂದರ್ಯ. ತಿಳಿಯಿತೇ ? ”

“ ಅಪ್ಪಾ ನಿಮ್ಮ ಹೇಳಿಕೆಯಂತೆ ಇರುವೆವು ನಿಮ್ಮ ಆಶೀರ್ವಾದ ನಮ್ಮನ್ನು ಕಾಪಾಡುವದು ”

“ ಆದರೆ ನೀವು ನಮಗೆ ಇನ್ನೂ ಬಹು ದಿನ ಬೇಕು. ” ಬಂಗಾರಿ ಅಂದಳು.

“ ಅದೇನು ಯಾರ ಕೈಯಲ್ಲಿದೆ ? ಅಗೋ ನೋಡು ದೂರ ದೀಪಗಳು ಮಿನುಗುತ್ತವೆ ” ಮಾನಪ್ಪ ಅಂದನು.

